

# ಕುಟ್ಟಿ ದೊಣ್ಣೆ

ಎಮ್. ಸುಬ್ರಾಯನ್

ವಿವೇಕ ಸಾಹಿತ್ಯಮಾಲೆ.
ಮಂಗಳೂರು—3.

ಕುಸುಮ ೨

# ಕುಟ್ಟಿ ದೊಣ್ಣೆ

(ಕಥಾ ಸಂಕಲನ)



ಎಮ್. ಸುಬ್ರಾಯನ್





ವಿವೇಕ ಸಾಹಿತ್ಯ ಮಾಲೆ

ಡಿ. ನಂಬ್ರ 6-41 * ಮಣ್ಣಗುಡ್ಡೆ

ಮಂಗಳೂರ-3

ಪ್ರಥಮ ಮುದ್ರಣ
ಮಾರ್ಚಿ ೧೯೫೨



ಬೆಲೆ ಒಂದು ರೂಪಾಯಿ



ಮುದ್ರಕರು:
ಸರಸ್ವತಿ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್,
ಮಂಗಳೂರ-1.

ಸಂಪಾದಕ:
ರಾಮ ಮೊಳೆಯಾರ,
ವಿದ್ವಾನ್,
ಮಂಗಳೂರ-3.

# ಮುನ್ನುಡಿ

ವಿವಿಧರೀತಿಯ ಕತೆಗಳ ಸಂಕಲನ "ಕುಟ್ಟಿ ದೊಣ್ಣೆ". ಹಲವು ಬಗೆಯ ಸಾಮಾಜಿಕ ಚಿತ್ರಗಳನ್ನು ಈ ಹೊತ್ತಗೆಯಲ್ಲಿ ಕಾಣಬಹುದು. ಮಾನವ ಜೀವನದ ಕೆಲವು ಸಮಸ್ಯೆಗಳನ್ನು ಈ ಕತೆಗಳಲ್ಲಿ ಕಥಾವಸ್ತುವಾಗಿರಿಸಿ ವಿವೇಕದ ಬೆಳಕನ್ನು ನೀಡುವುದಕ್ಕೆ ಯತ್ನಿಸಲಾಗಿದೆ. ಈ ಉತ್ತಮ ಕೃತಿಯನ್ನು ವಿವೇಕ ಸಾಹಿತ್ಯಮಾಲೆಯ ಎರಡನೆಯ ಕುಸುಮವಾಗಿ ವಾಚಕರ ಮುಂದಿಡಲು ಆನಂದ ಪಡುವೆವು.

ನಮ್ಮ ಉದ್ಯಮಕ್ಕೆ ಬೆಂಬಲ ನೀಡಿ ಸಹಕರಿಸಿ ಪ್ರೋತ್ಸಾಹಿಸಿದ ಉದಾರ ಕನ್ನಡಿಗರಿಗೆ ನಮ್ಮ ವಂದನೆಗಳು. ಮುಂದೆಯೂ ಇದೇ ರೀತಿ ಸಹಕರಿಸುವರಾಗಿ ನಂಬುವೆವು.

—ಸಂಪಾದಕ.

ಮುಂದಿನ ಕುಸುಮ

# ಸ್ವರ್ಗಲೋಕ

(ನಾಟಕ)

ಲೇ। ಎಮ್. ಕೆ. ಭಟ್ಟ, ವಿದ್ವಾನ್.

# ಅನುಕ್ರಮಣಿಕೆ.

# ಸುಬ್ಬ ಕಳ್ಳನಾಗಲು ಕಾರಣವೇನೊ?

ಸುಬ್ಬ ರಾಮರಾಯರ ಕೆಲಸಗಾರ. ತಿಂಗಳು ತಿಂಗಳು ಸಂಬಳ ಹೊಂದುವ ಶ್ರಮ ಜೀವಿ. ರಾಮರಾಯರು ನಮ್ಮೂರ ಹಿರಿಯ ಡಾಕ್ಟರರು. ಡಾಕ್ಟರರಿಗೆ ಅವರ ವೃತ್ತಿಯಲ್ಲಿ ತಿಂಗಳಿಗೆ ಸಾವಿರಗಟ್ಟಲೆ ಉತ್ಪತ್ತಿ. ಸುಬ್ಬನು ಡಾಕ್ಟರರು ಶಿಕ್ಷಣ ಹೊಂದಿ ವೃತ್ತಿಯನ್ನು ಆರಂಭಿಸಿದಂದಿನಿಂದ ಕೆಲಸಕ್ಕೆ ಸೇರಿದವ. ಡಾಕ್ಟರರಿಗೆ ಆದಾಯ ಹೆಚ್ಚಿದಂತೆ ಅವರ ಮನೆ, ಮನೆಯ ವಠಾರ, ವಠಾರದೊಂದಿಗೆ ಹೂದೋಟ, ಹೂದೋಟದೊಂದಿಗೆ ತೆಂಗು ಮಾವು ಇತರ ಫಲವೃಕ್ಷಗಳ ತೋಪೂ ಬೆಳೆದುವು. ಅವುಗಳ ಲಾಲನೆ ಪಾಲನೆಗೂ ಸೇವೆ ಗೃಹವೃತ್ತಿ ಇನ್ನಿತರ ಪೇಟೆ ಕೆಲಸಗಳಿಗೆಲ್ಲಾ ಇದ್ದವ ಸುಬ್ಬ.

ಸುಬ್ಬನಿಗೆ ಡಾಕ್ಟರರು ಕೆಲಸಕ್ಕೆ ಸೇರಿದಂದಿನಿಂದ ಕೊಡುವ ಸಂಬಳ ತಿಂಗಳಿಗೆ ಹದಿನೈದು ರೂಪಾಯಿ. ಸುಬ್ಬನಿಗೆ ಕೆಲಸ ಹೆಚ್ಚಿದರೂ ಅವನು ದಿನವಿಡೀ ದುಡಿದರೂ ಡಾಕ್ಟರರಿಗೆ ಆತ ಒಂದು ದಿನವಾದರೂ ತಪ್ಪದೆ ಬಂದಿರುವನೇ? ಬಾರದಿರುವನೇ? ಎಂಬ ಕಡೆಗೆ ವಿಚಾರವು ಹರಿಯುತ್ತಿತ್ತಲ್ಲದೆ ಅವನಿಂದು ಯಾವ ನೆಲೆಯಲ್ಲಿದ್ದಾನೆ? ಅವನ ಕುಟುಂಬವು ಆವ ಪಾಡಿನಲ್ಲಿವೆ? ಅವರ ಜೀವನದ ನಿರ್ವಾಹವೆಂತು? ಎಂಬುದರ ಕಡೆಗಿರಲಿಲ್ಲ.

ಸುಬ್ಬ ತರುಣ ಪ್ರಾಯದಲ್ಲಿ ಡಾಕ್ಟರರಲ್ಲಿ ಕೆಲಸಕ್ಕೆ ಸೇರಿದವ. ಆ ಮುಂದೆ ಅವನು ದಾಂಪತ್ಯಜೀವನವನ್ನು ಹೊಂದಿ ನಾಲ್ಕಾರು ಕಿರಿಯ ಮಕ್ಕಳ ತಂದೆಯಾಗಿರುವನು. ಈ ನೆಲೆಗೆ ಅವನು ಮುಟ್ಟಿದ್ದರೂ ಅವನಿಗೆ ಡಾಕ್ಟರರದ್ದು ಹಿಂದಿನದೇ ಸಂಬಳ. ಅದರಲ್ಲಿ ಬದಲಾವಣೆಯಿಲ್ಲ. ಆವ ಕೆಲಸಗಾರನೇ ಇರಲಿ, ಅವನು ಭಾರತದ ಧನಿಕರಲ್ಲಿ ಸೇವಕನಾಗಿರುವುದು ಕಷ್ಟ. ಇನ್ನಿತರ ಉದ್ಯೋಗ ಜೀವಿಗಳೂ ಇವನಂತೆಯೇ ಕಷ್ಟವನ್ನು ಪಡೆಯುವವರು. ಧನಿಕನು ಸೇವಕನ ಸಂಬಳದ ಕಡೆಗೆ ಕಣ್ಣಿಡುವ; ಅವನ ಕೆಲಸದ ಕಡೆಗೆ, ಕುಟುಂಬದ ಕಡೆಗೆ ಕಣ್ಣಿಡಲಾರನು. ಒಮ್ಮೆ ಸಂಬಳದ ನಿರ್ಣಯವಾದರೆ ಅವನ ಜೀವನದಲ್ಲಿ ಮತ್ತೆ ಸಂಬಳದಲ್ಲಿ ಏರುವಿಕೆಯಿಲ್ಲ. ಸಂಸಾರಿಕನಾಗಿ ಹಲವಾರು ಕುಟುಂಬಿಕರೂ ಮಕ್ಕಳೂ ಇರುವವಾದರೂ ಅವನೊಬ್ಬನ ದುಡಿತದಿಂದ ಅವರ ಜೀವನ ಸಾಗಬೇಕು. ಸಂಬಳದ ಹೆಚ್ಚಿನ ಪ್ರಶ್ನೆ ಬಂದರೆ, ಕುಟುಂಬದ ವಿಚಾರ ಬಂದರೆ, ಧನಿಕರು

ಮಕ್ಕಳೂ ಕುಟುಂಬದವರೂ ಹೆಂಡತಿಯೂ ಕೆಲಸಕ್ಕೆ ಬರುವರೇ? ಆವುದಕ್ಕೆ ಸಂಬಳವನ್ನು ಹೆಚ್ಚಿಸಬೇಕೆಂದು ಕೇಳುವರು. ಪಾಪ! ಬಡವನಾಗಿ ಹುಟ್ಟು ವುದು ಕಷ್ಟ. ಅದರಲ್ಲಿ ಸಂಸಾರಿಕನಾಗಿರುವುದೂ ಭಾರತದ ಬಡ ಸಂತಾ ನಕ್ಕೆ ಇನ್ನೂ ಕಷ್ಟ. ಜೀವನದಲ್ಲಿ ಬಡವರ ಸುಖದ ಬಯಕೆಗಳು ಎಂದೂ ಮಣ್ಣು ಪಾಲು. ಅವರಿಗೆ ಮಕ್ಕಳನ್ನು ಓದಿಸಬೇಕು. ಶಿಕ್ಷಿತರಾಗಿರಿಸ ಬೇಕು; ಎಂಬ ಹಂಬಲವಿಲ್ಲದಿಲ್ಲ. ಅದನ್ನು ಅವರು ಮಾಡುವುದಾದರೂ ಹೇಗೆ? ಕೆಲಸ ಮಾಡುವ ಈ ಶ್ರಮಜೀವಿಗಳು ಧನಿಕರ ಸುಖಕ್ಕೆ ಕಾರಣ ರೆಂಬುದು ಧನಿಕರಿಗಿನ್ನೂ ತಿಳಿದಿಲ್ಲ. ಅವರ ಸುಖಕ್ಕೆ ಬಡವರು ತಮ್ಮ ಪ್ರಾಣವನ್ನು ಸಂಪೂರ್ಣ ಸವೆಸುವರು. ಒಡಲಿನ ರಕ್ತವನ್ನು ಧನಿಕನ ಸುಖದುಣಿಸಿಗೆ ಚೆಲ್ಲುವರು. ಅದನ್ನುಂಡು ತಿಂದು ತೇಗಿ ಬಳೆದರೂ ಕಾಣುವ ತಪ್ಪು ಬಡವನಲ್ಲಿ. ಕೆಲಸಗಾರನಲ್ಲಿ. ಕೆಲಸಗಾರನಿಗೆ ಹೊಟ್ಟೆ ತುಂಬ ಉಣ್ಣುವ, ರುಚಿ ರುಚಿಯ ಖಾದ್ಯಗಳನ್ನು ತಿನ್ನುವ ಅಭಿಲಾಷೆಯಿದೆ. ಅವುಗಳನ್ನೆಲ್ಲಾ ಸಿರಿವಂತನಿಗೆ ಕೆಲಸಗಾರ ಮಾಡಿ ಕೊಡುವ. ಉಣ್ಣು ವಂತೆ, ಭೋಗಿಸುವಂತೆ ಅವನು ಮಾಡುವ. ಗಾಣದೆತ್ತಿನ ಜೀವನ ಕೆಲಸ ಗಾರನದ್ದು. ಕೊಟ್ಟ ಇಲ್ಲವೇ ಹೇಳಿದ ಕೆಲಸ; ಹಾಕಿದ ತೀನಿ; ಕೆಲಸ ಗಾರ ಮತ್ತು ಗಾಣದೆತ್ತಿನದ್ದು. ಗಾಣಗಾರನು ಹೊಂದುವ ಸುಖಭೋಗ ಗಳಿಗೆಲ್ಲಾ ಎತ್ತು ಕಾರಣವಿದ್ದರೂ ಅದರ ಆಹಾರ ಮತ್ತು ಸಾಕುವಿಕೆಯ ವಿಚಾರದರಿವು, ಎತ್ತಿನ ಪ್ರಾಯದರಿವು, ದಣಿವು, ಇವುಗಳನ್ನೊಂದೂ ನೋಡದೆ ದುಡಿಸುವವ ಗಾಣಿಗ. ಇಂತಹ ಗಾಣಿಗರೇ ಕೆಲಸಗಾರರ ಧನಿ ಗಳು. ಧನಿಗಳು ಕೆಲಸಗಾರನ ಪ್ರಾಯ ಕಷ್ಟ ಸುಖಗಳ ಕಡೆಗೆ ಕಣ್ಣಿಡದೆ ತಮ್ಮ ಆದಾಯದೊಂದೇ ದೃಷ್ಟಿಯಿಂದ ಕೂಡಿರುವವರು. ಅವರಿಗೆ ಬಡ ಕೆಲಸಗಾರನ ಕಷ್ಟ ಸುಖ ದುಃಖ ಏನು ಗೊತ್ತು? ತಮ್ಮ ಕೆಲಸ–ಆದಾಯ ಇವೆರಡನ್ನೇ ಕಾಣುತ್ತಿರುವರು. ನಮ್ಮ ಡಾಕ್ಟರರೂ ಇಂತಹ ಧನಿಗಳು.

ಸುಬ್ಬನಿಗೆ ದಾಂಪತ್ಯ ಜೀವನವಾದಂದಿನಿಂದ ಬಾಳಿನಲ್ಲಿ ಹೊಟ್ಟೆಯ ಪ್ರಶ್ನೆಯೊಂದೇ ಮೊದಲಿನದಾಗಿತ್ತು? ಡಾಕ್ಟರರಲ್ಲಿ ಸಿಕ್ಕಿದ ಸಂಬಳವು ಇಷ್ಟು ಮಂದಿಗಳ ಜೀವನಕ್ಕೆ ಸಾಕೇ? ಒಪ್ಪೊತ್ತು ಹೊಟ್ಟೆ ತುಂಬಾ ಉಣ್ಣುವ ಭಾಗ್ಯ ಅವನಿಗಿಲ್ಲ. ಅಂತೆಯೇ ಭಾರತದ ಶ್ರಮಜೀವಿಗೂ ಅಲ್ಪ ವೇತನದ ಉದ್ಯೋಗ ಜೀವಿಗೂ ಇವನ ನೆಲೆ.

ಸುಬ್ಬನು ಮನೆಬಾಡಿಗೆ ತೆರಬೇಕು. ಹೆಂಡತಿಮಕ್ಕಳ ಮಾನಮುಚ್ಚು ಕುವ ಬಟ್ಟೆ, ಬಟ್ಟೆಯೊಂದಿಗೆ ಆಹಾರ ಇವುಗಳನ್ನೂ ಹದಿನೈದು ರೂಪಾಯಿ ಯಿಂದ ಪೂರೈಸಬೇಕು. ಕೆಲಸಗಾರನ ಪ್ರಶ್ನೆಗಳು ಉಳಕೊಳ್ಳುವ ಮನೆ, ಮಾನಮುಚ್ಚುವ ಬಟ್ಟೆ, ಹೊಟ್ಟೆಯ ಹಸಿವನ್ನಡಗಿಸುವ ಆಹಾರ ಇವು ಮೂರೇ. ಈ ಮೂರರ ಸುಖ ಕೆಲಸಗಾರರ ಪಾಲಿಗಿಲ್ಲ. ಆದರೂ ಅವರು ದುಡಿಮಣಿಸಬೇಕು ಧನಿಯನ್ನು. ದುಡಿದುಣಿಸುವವರಾದರೂ ಈ ಮೂರನ್ನು ಧನಿಯು ಕಾಣದೆ ರಾವಣನು ಕಾಂಚನ ಮೃಗವನ್ನು ರಾಮನ ಮುಂದೆ ಸುಳಿಸುವಂತೆ ಮಾಡಿ ರಾಮನಿಗೆ ವಿಪತ್ತಿಗಿಳುಹಿದಂತೆ ಕಾಂಚನವನ್ನು ತೋರಿ ಸೇವಕರನ್ನು ಕಷ್ಟಕ್ಕೊಳಪಡಿಸುವನು. ಸುಬ್ಬನಿಗೆ ಬಡವರ ಮೂರು ಪ್ರಶ್ನೆಗಳೂ ಸಂಸಾರವಾದಂದಿನಿಂದ ಬಳೆದು ಪ್ರಶ್ನೆಯುನ್ನುತ್ತರಿಸುವ ಶಕ್ತಿಯು ಕಡಮೆಗೊಂಡಿತು. ಅವನು ಡಾಕ್ಟರರಲ್ಲಿ ಕೆಲಸ ಮಾಡುತ್ತಿರುವನು. ಅವ ನಿಗೆ ಹಸಿವೆಯು ಬಾಧಿಸುತ್ತಿದೆ. ಮನೆಯ ವಿಚಾರಗಳು ಕೊರಗಿಸುತ್ತಿವೆ.

ಡಾಕ್ಟರರಿಗೆ ದೊಡ್ಡ ತೋಪು. ತೋಪಿನಲ್ಲಿ ಫಲವೃಕ್ಷಗಳಿವೆ. ಫಲ ವೃಕ್ಷಗಳಲ್ಲಿ ತುಂಬಾ ಹಣ್ಣುಗಳು. ತೆಂಗಿನ ಮರದಲ್ಲಿ ತುಂಬಾ ಸೀಯಾಳ. ಮಾವಿನ ಮರದಲ್ಲಿ ಗೊಂಚಲು ಗೊಂಚಲಾಗಿ ಉತ್ತಮ ಪಕ್ವ ಫಲಗಳು ಜೋಲುತ್ತಿವೆ. ಅನನಾಸ್ ಮಾಗಿದೆ. ಹಸಿವಿನಿಂದ ಕೂಡಿದ ಸುಬ್ಬನು ತೋಟದ ಮರಗಿಡಗಳಿಗೆ ನೀರೆರೆದ. ಮೂರು ದಿನಗಳಿಂದ ಒಪ್ಪೊತ್ತೂ ಸರಿಯಿಲ್ಲ. ಹೊಟ್ಟೆ ಹಸಿವೆಯೊಂದೇ. ಹಸಿವೆಗೂಡಿದ ಆತನಿಗೆ ಮರ ಗಳಲ್ಲಿ ಮಾಗಿದ ಹಣ್ಣನ್ನು ಕಂಡು ಹೊಟ್ಟೆಯ ಹಸಿವನ್ನು ಅದರಿಂದ ಅಡ ಗಿಸುವಂತೆ ಮನಸ್ಸು ಹೇಳುತ್ತಿದೆ. ಕಳ್ಳತನದಿಂದ ಅವನು ಹಣ್ಣನ್ನು ಕೊಯ್ಯುವಂತೆ ಮನಸ್ಸು ಉಪದೇಶಗೊಡುತ್ತಿದೆ. ಕಳ್ಳತನ ಮಾಡಿಸಲಿಕ್ಕೆ ಕಳವು ಮಾಡುವ ಮನಸ್ಸುಂಟಾಗುವಂತೆ ಮಾಡುವರಾರು? ಧನಿಕರು ಇದ ನ್ನರಿತಿರುವರೇ? ಅಂತಿದ್ದರೆ ಕಳ್ಳತನವು ಕೆಲಸಗಾರರಿಂದೇಕೆ ನಡೆಯುತ್ತದೆ. ಡಾಕ್ಟರರು ಕೇಳಿದರೆ ಹಸಿವಡಗಿಸಲು ಹಣ್ಣನ್ನು ಕೊಡುವರಲ್ಲ. ಇದರಿಂದ ಸುಬ್ಬನು ಸಂಜೆಯ ಹೊತ್ತು ಒಂದು ಮರದಿಂದ ಮಾವಿನ ಹಣ್ಣು ಮತ್ತು ಇನ್ನೊಂದೆಡೆಯಿಂದ ಮಾಗಿದ ಅನನಾಸನ್ನು ಕೊಯ್ಯುವ ನಿರ್ಧಾರ ಮಾಡಿದ. ನೀರೆರೆದ ಬಳಿಕ ಮಾವಿನ ಮರವನ್ನು ಹತ್ತಿದ. ಮಾವಿನ ಮರಕ್ಕೆ ಹತ್ತಿದವ ಎರಡು ದೊಡ್ಡ ಮಾವಿನ ಹಣ್ಣುಗಳನ್ನು ಕಿಸೆಗೆ ತುಂಬುವಷ್ಟರಲ್ಲಿ ಡಾಕ್ಟರರ

ಮಗ ಅಲ್ಲೇ ಬಂದ. ಮರದಲ್ಲಿದ್ದ ಸುಬ್ಬನನ್ನು ಅವ ನೋಡಿದ. ನೋಡಿ ದೊಡನೆ "ಸುಬ್ಬ ಏನು ಮಾಡುತ್ತಿ?" ಎಂದ. ಆಗ ಅವನು "ಮರದ ಗೆಲ್ಲು ಹಣ್ಣಿನ ಭಾರದಿಂದ ಮುರಿಯಲಾಗಿತ್ತು. ಅದನ್ನು ಸರಿಪಡಿಸ ಹತ್ತಿದೆ" ಎಂದ. ಹುಡುಗನಲ್ಲಿಂದ ನಡೆದ. ಮೆಲ್ಲಮೆಲ್ಲನೆ ಕಳ್ಳ ಹೆಜ್ಜೆಯಿಕ್ಕಿ ಸುಬ್ಬ ಒಂದು ಅನನಾಸನ್ನು ಕೊಯ್ದು ತೋಟದ ಹಿಂದಿನ ದಾರಿಯಿಂದ ಮನೆಗೆ ಸೇರಿದ.

*   *   *   *

ಮಾರನೆ ದಿನ ಬೆಳಗಾಗುತ್ತಲೇ ಡಾಕ್ಟರರು ತೋಟಕ್ಕೆ ತಿರುಗ ಹೋದವರು ಗಿಡಮರಗಳನ್ನು ನೋಡುತ್ತಾ ಬರಲು ಅವರ ಕಣ್ಣಿಗೆ ಎದುರಿ ಗಿದ್ದ ಅನಾನಾಸೂ ಇನ್ನೊಂದು ಮರದ ಮಾವಿನ ಹಣ್ಣೂ ಮಾಯವಾದುದು ಕಂಡು ಬಂತು. ಅದರೊಂದಿಗೆ ದಾಳಿಂಬದ ಎರಡು ಹಣ್ಣುಗಳೂ ಇಲ್ಲ ದಾಗಿದ್ದುವು. ತೋಟದಿಂದ ತಿರುಗಿ ಮನೆಗೆ ಬಂದವರು ಮನೆಯಲ್ಲಿ ವಿಚಾ ರಿಸಲು ಡಾಕ್ಟರರ ಮಗ ಸುಬ್ಬ ನಿನ್ನೆ ಸಂಜೆ ಮಾವಿನ ಮರದಲ್ಲಿದ್ದನೆಂದನು.

ಸುಬ್ಬನು ಕೆಲಸಕ್ಕೆ ಬಂದನು. ಬಂದುದೇ ತಡ. ಸುಬ್ಬನನ್ನು ಡಾಕ್ಟ ರರು ಅಪರಾಧಿಯಾಗಿ ಮಾಡಿ ಪೋಲೀಸರಿಗಿತ್ತರು. ಉದ್ಯೋಗದಲ್ಲಿದ್ದ ಕೆಲಸಗಾರನ ತಪ್ಪೋ ಅಥವಾ ಧನಿಯ ತಪ್ಪೋಯೆಂಬ ವಿವೇಚನೆಯು ತಿಳಿ ವಿರಲಿಲ್ಲ ಪೋಲೀಸರಿಗೆ. ಅವರು ಕಾಂಚನ ದೇವತೆಯ ಬಲಿಗೆ ಬಿದ್ದು ಬಡ ಸಹೋದರರನ್ನು ಹಿಂಸಿಸುತ್ತಿರುವರು. ತುಚ್ಛ ಧನದೇವಿಯು ಅವ ರನ್ನು ಮಂದಮತಿಯಾಗಿ ಮಾಡುತ್ತಿದೆ. ಇಲ್ಲವಾದರೆ ಇಂತಹ ಕರಾಳ ವರ್ತನೆ ಇನ್ನೂ ಆಗುತ್ತಿದೆಯೇಕೆ?

ಸುಬ್ಬ ಸೆರೆಗೆ ಸೇರಿದ. ಸೆರೆಗೆ ಸೇರಿದ ಆತನು ಸಮಾಜವಾದಿಯಾದ ಕೃಷಿಕನೊಬ್ಬನ ಪರಿಚಯಗೊಂಡ. ಆತನು ಸಮಾಜವಾದೀ ಧನಿಕ ಜಮಾ ನುದಾರ. ಜಮಾನುದಾರರಿಗೆ ಹೊರಿಸುತ್ತಿರುವ ಕರ ಸಂಪ್ರದಾಯವು ಹಲ ವಾರು ವಿಧವಾಗಿ ಹೆಚ್ಚುತಿದ್ದು ಅದಕ್ಕಾಗಿ ಅಂದೋಲನವೆಬ್ಬಿಸಿ ಸೆರೆಗೊಂಡ ಮುಂದಾಳು. ಇಂದಿನ ಜಮಾನುದಾರರ ವೃತ್ತಿ ದಲಾಲಿಗಳ ವೃತ್ತಿಯೆಂದು ಆತನು ಹೇಳುತ್ತಿರುವ, ಧನಿ ಮತ್ತು ರೈತರ ಸರಿಯಾದ ಸಂಪರ್ಕ ಸಂಬಂಧ ವನ್ನರಿತ ನ್ಯಾಯ ಮುಖಂಡ. ಅವನೇ ಕೃಷ್ಣ.

ಕೃಷ್ಣನೊಂದಿಗೆ ಸೆರೆಯಲ್ಲಿ ಸುಬ್ಬನಿದ್ದು ಸಮಾಜದ ತತ್ವಗಳನ್ನರಿತ. ಸೆರೆಯು ದಂಡನೆಗೊಂಡವನಿಗೆ ಮತ್ತೂ ಅನ್ಯಾಯ ವರ್ತನೆಗಿಳಿಯುವಂತೆ ಮಾಡುತ್ತದಾದರೂ ಕೃಷ್ಣನ ಗೆಳೆತನ ಸುಬ್ಬನಿಗೊದಗಿ ಅವನು ಸೆರೆಯಿಂದ ಕೃಷ್ಣನ ಸಹೋದ್ಯೋಗಿಯಾದ. ತಿಳುವಿನಿಂದ ಬದಲಿದ.

ಸೆರೆಯಿಂದಿಬ್ಬರೂ ಒಂದೇ ದಿನ ಬಿಡುಗಡೆಗೊಂಡರು. ಬಿಡುಗಡೆಗೊಂಡ ಬಳಿಕ ಕೃಷ್ಣನು ಸುಬ್ಬನನ್ನು ಬಿಡಲಿಲ್ಲ. ತನ್ನೊಂದಿಗೆ ಕರೆದ. ಅವನು ಉತ್ತಮ ಜಮೀನುದಾರನಿದ್ದು ಕೃಷಿ ತರಬೇತಿಯ ಶಿಕ್ಷಿತ ತರುಣನಾಗಿದ್ದನು. ಕೃಷ್ಣನು ಹಲವಾರು ಒಕ್ಕಲಿಗರನ್ನು ತನ್ನೊಂದಿಗೆ ಕರೆದು ತಾನೂ ಕೃಷಿ ಕೆಲಸವನ್ನು ಮಾಡುವನು. ಕೃಷಿ ವಿಧಾನವನ್ನು ಎಲ್ಲರಿಗೂ ಬೋಧಿಸುವನು. ತನ್ನಲ್ಲಿ ಬೆಳೆದ ಆಹಾರ ಸಾಮಗ್ರಿಗಳಿಂದೆಲ್ಲರನ್ನೂ ತೃಪ್ತಿಪಡಿಸುವನು. ಏಕತಾ ಭಾವನೆಯಿಂದ ಏಕ ಕುಟುಂಬಿಕರಂತೆ ಕೃಷ್ಣನಿದ್ದನು. ಸುಬ್ಬನೂ ಅವನೊಡನೆ ಸೇರಿದಾಗ ಅವನ ಕುಟುಂಬವೂ ಬಂದಿತು. ಎಲ್ಲರಿಗೂ ಊಟ-ಉಪಚಾರಕ್ಕೆ ಕೊರತೆಯಿಲ್ಲ. ಎಲ್ಲರೂ ಒಂದಾಗಿ ದುಡಿಯುವರು. ಹಸಿವನ್ನಡಗಿಸಿ ಮನೆ ಹೊಟ್ಟೆ ಬಟ್ಟೆಯ ಪ್ರಶ್ನೆಯಿರದವರಾಗಿ ಕೃಷ್ಣನ ಅನುಯಾಯಿಗಳಾಗಿದ್ದರು. ಅವನ ಕೃಷಿಕ್ಷೇತ್ರವು ಹೆಸರುವಾಸಿಯಾಯಿತು. ಡಾಕ್ಟರರೊಮ್ಮೆ ಅವನ ಕೃಷಿ ಕ್ಷೇತ್ರದ ಸಂದರ್ಶನೆಗಾಗಿ ತನ್ನ ತೋಪಿನ ಬೆಳೆಸುವಿಕೆಯನ್ನು ಮನದಲ್ಲಿಟ್ಟು ಕೃಷ್ಣನಲ್ಲಿಗೆ ಬಂದರು. ಕೃಷ್ಣನಲ್ಲಿ ತುಂಬಾ ಜನರಿರುವರು. ಎಲ್ಲರೂ ದುಡಿಯುತ್ತಿರುವರು. ಡಾ। ರಾಮರಾಯರು ಕೃಷ್ಣನ ಹಿಂಬದಿಯಲ್ಲಿ ಸುಬ್ಬನನ್ನು ಕಂಡರು. ಕಂಡೊಡನೆ ಕೃಷ್ಣನಿಗೆ ಸನ್ನೆ ಮಾಡಿ ಸಮೀಪಕ್ಕೆ ಕರೆದರು. ಕರೆದು ಕಿವಿಯಲ್ಲಿ ಸುಬ್ಬ ಕಳ್ಳನೆಂದೂ ತನ್ನಲ್ಲಿದ್ದನೆಂದಿತ್ಯಾದಿಯಾಗಿ ಹೇಳಿದರು. ಕೃಷ್ಣನು ಅದಾಗ ಡಾ। ರಾಮರಾಯರಿಗೆ, "ನನ್ನಲ್ಲಿರುವ ಮಂದಿಗಳಾರೂ ಕಳ್ಳರಲ್ಲ. ಅವರಿಗೆ ಕಳುವ ವಿಚಾರವು ಒದಗುವುದಿಲ್ಲ. ಎಲ್ಲರೂ ಏಕ ಕುಟುಂಬಿಗಳಂತೆ ದುಡಿಯುತಿದ್ದು ಹೊಂದಿದ ಬೆಳೆಯಿಂದ ಸುಖ ಪಡೆಯುವೆವು. ಸುಬ್ಬನೂ ಅವನ ಕುಟುಂಬವೂ ಸುಖದಿಂದಿದೆ, ಚೋರ ವರ್ತನೆಯು ಅವನಲ್ಲಿ ಇಂದಿಲ್ಲ. ಅಂದಿನ ವರ್ತನೆ ಹಾಗೇಕಾಯಿತೋ? ಕಳ್ಳನಾಗಲು ಕಾರಣವೇನೊ?" ಎಂದನು.

ಡಾಕ್ಟರರ ಮುಖ ಕೆಳಕ್ಕೆ ಬಾಗಿತು. ಮುಂದೆ ಅವರು.......

ಪ್ರಭಾತ **19-3-1945.**

# ಬೇಡಿಕೆ

ಇಳಿ ವಯಸ್ಸಲ್ಲ; ಯೌವನದ ಹರೆಯ. ಆದರೂ ದಾರಿದ್ರ್ಯ ಪಿಶಾಚಿಯ ಪೀಡೆಗೆ ತುತ್ತಾದ ಆ ಕಮನೀಯ ದೇಹವು ಕಾಂತಿ ವಿಹೀನವಾಗಿದೆ. ಭಾಸುರದುಕೂಲದಿಂದ ಸಿಂಗರಿಸತಕ್ಕ ದೇಹವು ಮಲಿನ ವೃತ್ತಿಕಾದುಕೂಲವನ್ನು ವಹಿಸಿದೆ. ಕಂಚುಕವು ಛಿದ್ರಪೂರ್ಣವಾಗಿದೆ. ಕಣ್ಣು ಕುಗ್ಗಿದೆ. ಕದಪು ಒಟ್ಟಿದೆ. ಭೂಷಣಗಳಿಲ್ಲ. ಕೇಶಪಾಶವು ನಮ್ರತೆಯನ್ನು ಬಿಟ್ಟಿದೆ. ಹಸಿವೆ, ಬಾಯಾರಿಕೆಗಳ ಪೆಟ್ಟನ್ನು ದಿನದಿನವೂ ತಿಂದು ಒಡಲು ವೇದನಾಪೂರ್ಣವಾಗಿದೆ. ನಾಡಿಗರ ಬಾಯಿಯಿಂದ, ಸಮಾಜದ ಕಟ್ಟಳೆಯಿಂದ ಕುಲಟೆ, ಪಣ್ಯಾಂಗನೆ ಎಂಬ ಬಹುಮಾನ ವಚನ ಪ್ರಶಸ್ತಿಪತ್ರವನ್ನು ಹೊಂದಿದ್ದಾಳೆ. ಅನಾಥೆ. ಇಂತಹಳಿಗೆ ಮರಗಿಡಗಳ ಅಡಿಯೇ ಮನೆ ಹೊರತು ಬೇರಿಲ್ಲ. ಭೂಮಾತೆಯು ಮಾತ್ರ ಸುಖದುಃಖಗಳ ಸಮಯ ಆನಂದ ಸಾಂತ್ವನೆಗಳಿಗೆ ಆಶ್ರಯ. ಹತ್ತಾರು ಮನೆಗಳನ್ನು ತಿರಿದು ಸಿಕ್ಕಿದ ಸಾಮಗ್ರಿಯೇ ಅವಳ ಜೀವನಕ್ಕೆ ಆಧಾರ. ಎರಡು ಮೂರು ವರ್ಷಗಳಿಗೆ ಮೀರದ ಬಾಲಕನೇ ತನ್ನೊಂದಿಗೆ ಇರುವವ.

ಬೇಸಗೆ ಸಮಯವಾದ್ದರಿಂದ ಮಾವಿನ ಮರದಡಿಯಲ್ಲಿ ತನ್ನ ಉತ್ಸಂಗದ ಮೇಲೆ ಮಗುವನ್ನು ಕುಳ್ಳಿರಿಸಿದ್ದಾಳೆ. ಬಿದ್ದಿರುವ ಹಣ್ಣನ್ನು ಮಗುವಿಗಿತ್ತು ಕೂಗನ್ನು ಇಲ್ಲದಂತೆ ಮಾಡುತ್ತಿದ್ದಾಳೆ. ಅಳು ನಗು ಒಂದಿಗೆ ಇರುವ ಮಗುವಿನ ಮುಖವು ಪ್ರಸನ್ನವಾಯಿತು. ಅಮ್ಮಾ, ಅಮ್ಮಾ, ಮಮ್ಮ ಎಂಬಿತ್ಯಾದಿಯಾಗಿ ಹೇಳುತ್ತಿದೆ. ಬಾಲಚಾಪಲಕ್ಕೆ ಸಂತೋಷಪಡೆದ ಆ ಜನನಿಯು ಬಾಲಕನಿಗೆ ಮುತ್ತಿನ ಬಹುಮಾನವೀಯುತ್ತಿದ್ದಾಳೆ.

* * * *

ಸುಧನು ಬಿ. ಎ. ಪದವಿಯನ್ನು ಹೊಂದಿಯಾಯಿತು. ಸರ್ವಕಲಾ ನಿಲಯದ ಶಿಕ್ಷಣವು ಕೊನೆಗೊಂಡು ಮನೆಗೆ ಬಂದಿದ್ದಾನೆ. ಅವನ ತಾಯಿಯ ಮನದೆಣಿಕೆಯಂತೆ ಹಾಗೂ ಹೀಗೂ ಬಿ. ಎ. ಪಾಸು ಮಾಡಿದ್ದಾಯಿತು. ಸರಕಾರಿ ಉದ್ಯೋಗದ ಗಾಳಿಗೋಪುರ, ಮಗನಿಗೆ ವಿವಾಹ,

ಇದಿಷ್ಟನ್ನ್ನು ಅವಳಿಗೆ ಕಣ್ಣಾರೆ ಇನ್ನು ಕಂಡರೆ ಸಾಕು ಎಂಬ ಹವಣಿಕೆ.
ಸುಧನು ಮನೆಯ ಒಂದು ಕೊಠಡಿಯಲ್ಲಿ ಪುಸ್ತಕ, ಪತ್ರಿಕೆಗಳನ್ನು ಓದು
ತ್ತಿದ್ದಾನೆ. ಅಲ್ಲಿಗೆ ಅವನ ತಾಯಿಯು ಸರಾಗವಾಗಿ ಬಂದಳು. ತಾಯಿಗೆ
ತಾನು ಕುಳಿತಿದ್ದ ಆರಾಮಾಸನವನ್ನಿತ್ತು ತಾನೂ ಒಂದು ಆಸನದ ಮೇಲೆ
ಕುಳಿತುಕೊಂಡ. ತಾಯಿಯ ಬರೋಣವು ಏಕೆಂದು ಇನ್ನೂ ಅವನಿಗೆ
ಗೊತ್ತಿಲ್ಲ.

ಒಂದಲ್ಲ, ಎರಡಲ್ಲ, ಮೂರಲ್ಲ, ಸಾವಿರಾರು ಹಾಳು ಹರಟೆಗಳಾದವು.
ಕೊನೆಗೆ ಅವನ ತಾಯಿಯು ತಾನು ಮಾತಾಡುವ ಉದ್ದೇಶದ ಸಂಗತಿಗೆ
ಪೀಠಿಕಾರೂಪವಾಗಿ 'ನನಗೆ ವಯಸ್ಸಾಯಿತು' ಅಂದಳು. ಆ ಮೇಲೆ 'ನಿನ್ನ
ಮದುವೆ ಉದ್ಯೋಗಗಳನ್ನು ಕಂಡು ನನಗೆ ಪ್ರಾಣ ಹೋದರೆ ಸಾಕು' ಎಂದು
ಒಮ್ಮೆಗೆ ಮಾತನ್ನು ನಿಲ್ಲಿಸಿ ಬಿಟ್ಟಳು.

ತನ್ನ ವಿವಾಹದ ವಿಷಯವನ್ನು ಕುರಿತು ಹೇಳಿದಾಗ ಅವನ ಮುಖವು
ಅಲ್ಪ ಮ್ಲಾನವಾಯಿತು. ಅದಕ್ಕೆ ಅವನ ಮಾತೆಯು ವಿವಾಹ ಸಮ್ಮತಿಯ
ವ್ಯಾಖ್ಯೆಯನ್ನು ಹೃದಯದಲ್ಲಿ ಬರೆದು ಈ ರೀತಿಯಿಂದ ಹೇಳಿದಳು. "ಹುಡುಗಿ
ಯನ್ನು ನಾನು ನೋಡಿಟ್ಟಿರುವೆನು. ನುಗ್ಗೆಹಳ್ಳಿಯ ಮಾಧವರಾಯರ
ಕುವರಿ. ನಿನಗೆ ತಕ್ಕವಳು. ಮೆಟ್ರಿಕ್ ಈ ವರ್ಷ ಪಾಸಾದಳು. ಮದುವೆ
ಯಾದರೆ ವರದಕ್ಷಿಣೆ ಬೇಕಾದಷ್ಟು ಸಿಗುವುದು. ನಿನಗೆ ವಿವಾಹಕ್ಕೆ ಸಮ್ಮ
ತಿಯು ಇಲ್ಲವಷ್ಟೆ!"

ಸುಧನು ಯಾವ ಉತ್ತರವನ್ನೂ ಕೊಡಲಿಲ್ಲ. ನೀಳವಾದ ಉಸಿರು
ಬಿಟ್ಟನು. ಸ್ವಲ್ಪ ಹೊತ್ತಿನಲ್ಲಿ ತಾಯಿಯು ಸಂತೋಷದಿಂದ ಆ ಕೋಣೆ
ಯನ್ನು ಬಿಟ್ಟಳು.

* * * *

ಸುಧನು ಗತಕಾಲದ ಕಡೆಗೆ ತನ್ನ ಕಣ್ಣನ್ನು ತಿರುಗಿಸಿ, ಅಲ್ಲೇ ಕುಳಿ
ತನು. ತನ್ನ ಕಿರಿಯ ವಯಸ್ಸಿನ ಆಟ, ತಂದೆಯೊಡನೆ ಚಲ್ಲಣ ಕೋಟು
ಗಳಿಗಾಗಿ ಹಿಡಿದ ಹಟವೇ ಮೊದಲಾಗಿ ವಿದ್ಯಾಭ್ಯಾಸ ರಂಗದ ಒಂದೊಂದು
ಜೀವನದ ಮೆಟ್ಟಲುಗಳನ್ನೇರುತ್ತಾ ಹರುಷ, ವಿಸ್ಮಯ, ಅಶ್ರು, ಸ್ವೇದಗಳ
ಮಳೆಗರೆದನು.

ಬಾಲತನದಿಂದ ಮುಂದೆ ಮುಂದೆ ಬಂದು ಯೌವನವು ಕಾಡಿಯಿಟ್ಟ ವರೆಗಿನ ವಿಚಾರವಾಯಿತು. ಕಡೆಗೆ ಇಂದಿರೆಯ ಪ್ರಥಮ ದರ್ಶನ, ಅವಳ ನಾಮಸ್ಮರಣೆ ಅಲ್ಲಿಯ ವರೆಗೆ ಮುಟ್ಟಿ ಪುಲಕ ಸ್ವೇದಗಳಿಂದ ಒಮ್ಮೆ ದೇಹ ವನ್ನು ಸರಿಪಡಿಸಿಕೊಂಡನು.

ಕೊನೆಗೆ ಇಂದಿರೆಯ ಪರಿಚಯವಾದ ದಿನವನ್ನು ಸ್ಮರಿಸಿದನು......ಆ ಮೇಲೆ ಸಾಧಾರಣವಾಗಿ ಸಂಭವಿಸುವ ಅನುರಾಗಾವಸ್ಥೆ, ಮೊದಲಾದ ಎಲ್ಲ ವನ್ನೂ ಒಂದನ್ನೂ ಮರೆಯದೆ ನೆನಸತೊಡಗಿದನು. ತನ್ನನ್ನು ಭಯ ಭಕ್ತಿ ಬಹುಮಾನಗಳಿಂದ ಆದರಿಸಿದ ಸತ್ಕಾರಗೆಯ್ದ ಆ ಬಡ ಯುವತಿಯನ್ನು ಯೌವನ ಚಾಪಲ್ಯದಿಂದ ಮಾತಾಡಿಸಿದ........ಸಾಧ್ಯವಿಲ್ಲದ ನೆಲೆಗೆ ಇಳಿಸಿದ ಕರಾಳ ವರ್ತನೆಯನ್ನು ನೆನೆದು ಅದೊಮ್ಮೆ ಮೈನೆಟ್ಟೆಯೊಡೆದು..........ಆ ಮುಂದೆ ಉಚ್ಚ ಶಿಕ್ಷಣಕ್ಕಾಗಿ ಅಲ್ಲಿಂದ ಬಿಟ್ಟು ಕಾಲೇಜಿಗೆ ಹೋಗಲಾದ, ಆ ಮೇಲೆ ಅವಳನ್ನು ಕಾಣಲಾಗದ ವಿಷಯಗಳೆಲ್ಲಾ ನಿನ್ನೆಯೇ ನಡೆದಂತೆ ತೋರಿತು. ಕೃತಘ್ನನಾದ ತನ್ನನ್ನು ಹಳಿಯತೊಡಗಿದನು. ತನ್ನ ಮಾತು ಯಥಾರ್ಥವಾದುದು ಎಂದು ಪೂರ್ಣವಾಗಿ ನಂಬಿ ಆ ಬಡ ಯುವತಿಯನ್ನು ನಿಶ್ಶೇಷವಾಗಿ ನಾಶಗೊಳಿಸಿದ ಮೋಸಗೊಳಿಸಿದ ಆ ಮಹಾಪಾಪವು ಎಂತು ತೀರುವುದೆಂದು ಸಂತಾಪ ಖೇದಸಾಗರದಲ್ಲಿ ಓಲಾಡತೊಡಗಿದನು.

* * * *

ಸುಧನಿಗೆ ವಿವಾಹವು ನುಗ್ಗೆಹಳ್ಳಿಯಿಂದಾಯಿತು. ಪರಿಣಯ ಸಂಭ್ರ ಮವು ಕಳೆದು ಹತ್ತಾರು ದಿನಗಳಾದುವು. ಸರಕಾರಿ ಉದ್ಯೋಗವು ದೊರ ಕಿತು. ಅದು ಕಳೆದು ಕೆಲವು ದಿನಗಳಲ್ಲೇ ಜೀವನ ಕಾಲದಲ್ಲಿ ತನ್ನ ಆಗ್ರಹವನ್ನು ಕಂಡುಕೊಂಡ ತಾಯಿಯು ಪರಲೋಕ ಸೇರಿದಳು.

ಸುಧನು ಸರಕಾರಿ ನೌಕರ ಮತ್ತು ಅದರಲ್ಲಿ ಅದೀಗ ರಜೆಯ ದಿನ. ತಾನು ಮೊದಲು ವಿದ್ಯಾಭ್ಯಾಸವನ್ನು ಮಾಡಿದ ಊರಲ್ಲಿ ಒಂದೆರಡು ತಿಂಗಳು ಉಳಕೊಳ್ಳಲು ಮನಸ್ಸಾಯಿತು. ತನ್ನಾಕೆಯಾದ ಗೌರಿಯೊಡನೆ ಅನು ಮೋದನೆಯನ್ನು ಕೇಳಿಕೊಂಡ. ಇಬ್ಬರೂ ಅದೇ ಊರಿಗೆ ಹೋದರು.

ಹಳದಿಪುರದಲ್ಲಿ ಸುಧನು ಬಂದಿಳಿದು ಎರಡು ವಾರಗಳಾದುವು. ಒಂದು ಬಂಗಲೆಯನ್ನು ಮಾಡಿಕೊಂಡಿದ್ದಾನೆ. ಒಂದು ದಿನ ಬೆಳಗ್ಗೆ

ಸಾಧಾರಣ ಹತ್ತು ಘಂಟೆಯ ಸಮಯ. ಕಾಳಿದಾಸನ "ಮೇಘದೂತ" ವನ್ನು ಓದುತ್ತಿದ್ದಾನೆ.

ಅಷ್ಟರಲ್ಲಿ ದಾನ ಧರ್ಮ ಮಾಡಿರಪ್ಪಾ—ಎಂದು ಒಂದು ಕೂಗು ಅವನ ಕಿವಿಗೆ ಬಿದ್ದಿತು. ಸುಧನು ಅದನ್ನು ಕಿವಿಗೆ ಹಾಕಿಕೊಳ್ಳದೆ ಗೌರವವಾಗಿ ಕುಳಿತುಬಿಟ್ಟ.

ಅವನ ಹೆಂಡತಿಯಾದ ಗೌರಿಯು "ಬಡವರಲ್ಲವೇ?" ಎಂದು ವಿಶಾಲ ಹೃದಯದಿಂದ ಒಳಗೆ ಸರಸರನೆ ಹೋಗಿ ಒಂದು ನಾಣ್ಯವನ್ನು ಕೊಟ್ಟು ಬಿಟ್ಟಳು.

ಆ ಭಿಕ್ಷುಕಿಯು ಏನೆ ಇಕ್ಕದೆ ಸ್ವಲ್ಪ ಹೊತ್ತು ಗೌರಿಯನ್ನು ನೋಡಿ ದಳು. ಮತ್ತೆ ಕೆಲವು ನಿಮಿಷಗಳಲ್ಲಿ ಅಪ್ರತ್ಯಕ್ಷಳಾದಳು.

ಗೌರಿ ಮತ್ತು ಸುಧನು ಇವರಿಬ್ಬರು ಹಳದಿಪುರಕ್ಕೆ ಬಂದುದೇ ತಡ. ಒಬ್ಬೊಬ್ಬರು ಅವರನ್ನು ಕಾಣಲಾಗಿ ಬರುತ್ತಿದ್ದಾರೆ. ಅದೊಂದು ದಿನ ಜನ ಸಂದಣಿಯೇ ಸಂದಣಿ. ದಿನಾಲೂ ಜನ ಬರುತ್ತಿದ್ದಾರೆ ಹೋಗುತ್ತಿದ್ದಾರೆ.

ಒಂದು ದಿನ ಬೆಳಗ್ಗಿನ ಸಮಯ. ಗೌರಿಯು ಎದ್ದು ನೋಡುತ್ತಾಳೆ. ಮೊಗಸಾಲೆಯಲ್ಲಿ ಮೂರು ವರ್ಷದ ಬಾಲಕನು ನಿದ್ದೆ ಹೋಗುತ್ತಿರುವನು. ಅದಾರೂ ಹತ್ತಿರವಿರಲಿಲ್ಲ. ದೇಹ ಮುಖ ಎಲ್ಲಾ ಮನೋಹರವಾಗಿದೆ. ಸರ್ವಾಂಗ ಸುಂದರನಾದ ಬಾಲಕನು, ಏಕಾಕಿಯಾಗಿ ಮಲಗಿ ನಿದ್ದೆ ಹೋಗಿ ರುವನು ಎಂದು ಆಶ್ಚರ್ಯಚಕಿತಳಾದಳು. ಅಷ್ಟರಲ್ಲಿ ಸುಧನೂ ಅಲ್ಲಿಗೆ ಬಂದನು.

ಗೌರಿಯು ಬಾಲಕನು ಮಲಗಿದ್ದಲ್ಲಿಗೆ ಹೋದಳು. ಆ ಮಗುವಿನ ಸುಂದರ ವದನವನ್ನು ನೋಡಿ "ಇವನಾರು" ಎಂದು ಪ್ರಶ್ನಿಸಿದಳು.

ಸುಧನು "ನಾನರಿಯೆ" ಎಂದನು.

ಗೌರಿಯು "ಎಂತಹ ಬೆಡಗು!" ಎಂದಳು.

ಆ ಮೇಲೆ ಒಂದೆರಡು ನಿಮಿಷದಲ್ಲಿ ಆ ಬಾಲಕನು ಎಚ್ಚೆತ್ತನು. ಸುತ್ತುಮುತ್ತು ನೋಡಿದನು. ಆಗ ಆ ನವದಂಪತಿಗಳು ಮಗುವನ್ನು ನೋಡಿ

ಮಂದಹಾಸವನ್ನು ಬೀರಿದರು. ಅಷ್ಟರಲ್ಲಿ ಮಗುವಿನ ಮುಖವು ಕಂದಿತು. ಅಳ ತೊಡಗಿತು. "ಅಮ್ಮಾ, ಅಮ್ಮಾ" ಎಂದು ಕರೆದು ಕೂಗಿತು. ತಾಯಿಯು ಅಲ್ಲಿಲ್ಲೂ ಇದ್ದಿಲ್ಲ. ಗಟ್ಟಿಯಾಗಿ ಕೂಗತೊಡಗಿತು.

ಗೌರಿಯು ಬಾಲಕನು ಅಳುವನೆಂದು ಸಂತಾಪದಿಂದ ಒಳಗೆ ತಿಂಡಿ ಯನ್ನು ತರಹೋದಳು.

ಸುಧನು ಬಾಲಕನಿದ್ದಲ್ಲಿಗೆ ಹೋದನು. ಅವನ ಸಮೀಪದಲ್ಲಿ ಒಂದು ಪತ್ರವಿದ್ದಿತು. ಸುಧನ ಕಣ್ಣು ಅದರ ಕಡೆಗಾಯಿತು. ಆ ಪತ್ರವನ್ನು ತೆಗೆದನು. ಅದರಲ್ಲಿ ಅವನ ವಿಳಾಸವಿದ್ದಿತು. ಓದತೊಡಗಿದನು. ಅಷ್ಟು ಹೊತ್ತಿಗೆ ಗೌರಿಯು ಒಳಗಿನಿಂದ ಹೊರಬಂದಳು.

ಅವಳು "ಅದೇನು ಪತ್ರವೇ?" ಎಂದು ಕೇಳಿದಳು.

ಬಾಲಕನ ಹತ್ತಿರವಿದ್ದಿತೆಂದು ಸುಧನು ಅದಕ್ಕೆ ಉತ್ತರವನ್ನು ಹೇಳಿ ದನು.

ತಿಂಡಿಯು ಬಾಲಕನಿಗೆ ಸಿಕ್ಕಿತು. ಅಳು ನಿಂತಿತು.

ಗೌರಿಯು ವಾತ್ಸಲ್ಯದಿಂದ ನಿನ್ನ ಅಬ್ಬೆ ಎಲ್ಲಿರುವಳೆಂದು ಬಾಲಕ ನೊಡನೆ ಕೇಳಿದಳು.

ಬಾಲಕನು ಮಾತಾಡಲಿಲ್ಲ.

ಗೌರಿಯು ತನ್ನ ಗಂಡನೊಡನೆ ತಿರುಗಿ 'ಪತ್ರದಲ್ಲಿ ಏನಿದೆ?' ಎಂದು ಪ್ರಶ್ನಿಸಿದಳು.

ಆಗ ಸುಧನು ದುಃಖಪೂರಿತ ಕಂಠದಿಂದ "ನನ್ನ ಒಂದು ಮಹಪ ರಾಧವನ್ನು ಕ್ಷಮಿಸುವೆಯಾ?" ಎಂದು ಬೇಡಿದನು.

ಗೌರಿಯು ಚಕಿತಳಾಗಿ, "ಏನು ಎಂತಹ ಅಪರಾಧ?" ಎಂದು ಪ್ರಶ್ನಿಸಿ ದಳು.

ಸುಧನು "ಪತ್ರವನ್ನು ಓದು" ಎಂದು ಅವಳ ಕೈಗಿತ್ತು. ಕಣ್ಣೀರು ಮಿಡಿದನು.

"ಜೀವಿತೇಶ!—ಎನ್ನ ಹೃದಯವು ವಿಗ್ರಹ ಹೀನ ದೇಗುಲವು. ಅದಿಂದಿನ ವರೆಗೂ ಆರಾಧನೆಗೆ ಬಯಸುತ್ತಿತ್ತು. ಅಂತಿಮ ಸಮಯದಲ್ಲಿಂದು ಸಂಬೋಧನಾ ಮಂತ್ರ ಒಂದನ್ನೇ ಒಗೆದೆನು. ಅದರಿಂದ ಆತ್ಮತೃಪ್ತಿಯೂ ಶಾಂತಿಯೂ ಮುಂದಾದರೂ ಉದಿಸಲಿ. ಒಂದು ಕಾಲದಲ್ಲಿ ತಮ್ಮ ಅನುರಾಗಕ್ಕೆ ಪಾತ್ರೀ ಭವಿಸಿದ ಇಂದಿರೆಯನ್ನು ನೆನೆಯುವಿರಾದರೆ ಆ ಹತಭಾಗ್ಯೆಯೇ ಇವಳು. ನನ್ನ ಹೃದಯವನ್ನು ಅದೊಮ್ಮೆ ನಿಮ್ಮ ಅನುರಾಗವು ಮುಟ್ಟಿತು. ಆಗ ಅದು ಸರ್ವತ್ರ ರಾಗಮಯವಾಗಿ ರಂಜಿಸಿತು. ಹೊಳಪುಗೊಟ್ಟಿತು. ಹೊಳಪು ಕಂಡು ನಾನು ಮುಗ್ಧಳಾದೆ. ವಿಶ್ವಸ್ತಳಾದೆ. ತನ್ಮೊಳಗೆ ನಾನು ರಾಗರಸವನ್ನು ಹೀರಿದೆ. ಅಂದು ಮೊದಲು ದೇವರೆಂದು ನಿಮ್ಮನ್ನು ನೆನೆದೆ, ಪೂಜಿಸಿದೆ. ನಿಮಗಾಗಿ ಆತ್ಮವನ್ನೇ ಅರ್ಪಿಸಿದೆ. ಅದು ಸ್ತ್ರೀಯ ಸ್ವಭಾವ.

ನಾಲ್ಕು ಸಂವತ್ಸರಗಳ ಹಿಂದೆ ಅದೊಂದು ದಿನ ನೀವು ನನ್ನ ಮನೆಗೆ ಬಂದಿರಿ. ಆಗ ವಿಧವೆಯಾದ ನನ್ನ ಜನನಿಯು ಇದ್ದಿಲ್ಲದಿದ್ದುದೂ....ನೀವು ಆಗ ಪ್ರೇಮೋನ್ಮತ್ತರಾಗಿ....ಅಲ್ಲವಾದರೆ ಇದನ್ನು ನಾನೇಕೆ ವಿಸ್ತರಿಸಬೇಕು. ನಿಮ್ಮ ಅಭಿಲಾಷೆಯ ವಶವರ್ತಿಯಾಗಿ ಅಂತರ್ವತ್ನಿ ಎನಿಸಿದೆ. ಈ ಸಮಯದಲ್ಲಿ ಉಚ್ಚ ಶಿಕ್ಷಣಕ್ಕಾಗಿ ನನ್ನನ್ನು ಆಗಲಿ....

ಮತ್ತೆ ಹೆಚ್ಚು ದಿನಗಳು ಹೋಗಲಿಲ್ಲ. ತಾಯಿಯು ರೋಗ ಪೀಡಿತಳಾಗಿ ಇಹಧಾಮವನ್ನು ಬಿಟ್ಟಳು. ಆಗ ಒಂಭತ್ತು ತಿಂಗಳು.... ಕೊನೆಗೆ ಗಂಡು ಮಗುವನ್ನು ಹಡೆದೆ. ನನ್ನನ್ನು ಎಲ್ಲರೂ ಗಣಿಕೆಯೆಂದು ಕರೆದರು. ಸಮಾಜದಿಂದ ಹೊರಗೆಯ್ದರು.

ನನ್ನ ಜೀವಿತಾಧಾರ! ಅಂದಿನಿಂದ ನಾನು ಹೊಂದಿದ ಸಂಕಟ.... ಹಲವು ಬಾರಿ ಆತ್ಮಹತ್ಯವನ್ನು ಬಯಸಿದೆ. ಆದರೂ ಈ ಬಾಲಕನ ಸುಂದರ ಮುಖದರ್ಶನವು ಇದುವರೆಗೆ ನನ್ನನ್ನು ಉಳಿಸಿತು.

ಆ ಮೇಲಿನ ಜೀವಿತವು ಮನುಜ ವೃತ್ತಿಯದಲ್ಲ. ಎಲ್ಲಾ ದೈವಸಂಕಲ್ಪವು. ಕಷ್ಟ ಒದಗಿತು. ಸಹಿಸಿದೆ....

ನೀವು ಪತ್ನೀಸಮೇತರಾಗಿ ಬಂದುದನ್ನು ತಿಳಿದೆ. ಕೆಲವು ದಿನಗಳ ಮೊದಲು ಯಾಚಕಿಯಾಗಿ—ಭಿಕ್ಷುಕಿಯಾಗಿ ಕೆಲವು ಉದ್ದೇಶಗಳಿಂದ ಈ

ಗೃಹದಲ್ಲಿ ತಮ್ಮನ್ನು ಸಂದರ್ಶಿಸಿದೆ. ನಿಮ್ಮ ಅರ್ಧಾಂಗಿಯನ್ನು ಕಂಡೆ. ಅವಳ ಸ್ವಭಾವದ ಕೆಲವಂಶಗಳನ್ನು ಆಗ ಪರಿಗ್ರಹಿಸಿದೆ. ನನ್ನ ಉದ್ದೇಶವು ಸಫಲವಾಯಿತು.

ನಾನಿನ್ನು ಯಾರನ್ನೂ ಕಾಣೆನು. ಈ ಕೊನೆಯ ಕಾಲ ನನ್ನದೊಂದು ಬೇಡಿಕೆ ಇದೆ. ನಾನು ಬಾಲಕನನ್ನು ತಮಗೆ ಅರ್ಪಿಸುತ್ತೇನೆ. ಸಂರಕ್ಷಣಾಭಾರವು ಇನ್ನು ಮುಂದೆ ನನಗಿಲ್ಲ....ಈ ಬೇಡಿಕೆಯನ್ನು ನೀವು ಅಂಗೀಕರಿಸುವಿರಷ್ಟೇ.....ನಿಮಗೂ ನಿಮ್ಮ ಅರ್ಧಾಂಗಿಗೂ ಮಂಗಳವಾಗಲಿ. ಈ ಕರ್ಣ ರಹಸ್ಯವು ಇನ್ನಾರಿಗೂ ಕೇಳದಿರಲಿ.....

ಇತಿ, ಪಾದಸೇವಕಿ,

**—ಇಂದಿರೆ.**

ಗೌರಿಯು ಆ ಬಾಲಕನನ್ನು ಎರಡು ಕೈಗಳಿಂದ ಆನಂದಾಶ್ರುಪೂರ್ಣಳಾಗಿ ಹೃದಯದಲ್ಲಿ ತಬ್ಬಿಕೊಂಡಳು. ಅದು ಆ ದಿನದಿಂದ ಅವಳ ಮಗುವಾಯಿತು.

ಪ್ರಭಾತ 21-5-1939



# ಇನ್ನೆಂದೂ.......ಇಲ್ಲ

ಮೋತಿ ಸುಂದರನ ನಾಯಿ. ನೋಡಲು ಕಿರಿಯದಿದ್ದು ಮೈತುಂಬಾ ಉದ್ದ ಉದ್ದ ರೋಮ. ಅಗಲವಾದ ಹಣೆ. ಉದ್ದವಿರುವ ಮುಸುಡು. ಅರಳಿದ ಕೆಂಪು ಸೊಳ್ಳೆ. ಜೋಲು ಕಿವಿ. ಗಿಡ್ಡ ಗಿಡ್ಡ ಕಾಲುಗಳು. ರೋಮಗಳು ತುಂಬಿ ಅರಳಿದ ಚೆಲುವಿನ ಬಾಲ. ಯಾರಿಗೂ ನಾಯಿಯನ್ನು ಕಂಡಾಗ ಆನಂದ ಉಂಟಾಗುತ್ತಿತ್ತು. ಆಕಾರಕ್ಕೆ ತಕ್ಕ ನಡತೆಯೂ ಅದಕ್ಕಿದ್ದಿತು.

ಸುಂದರನು ದಿನಾಲೂ ಅದನ್ನು ಮೀಯಿಸುವನು. ಅದಕ್ಕೆ ಕೊಡುವ ಆಹಾರ ಒಳ್ಳೆ ಒಳ್ಳೆ ರುಚಿಯುವು ಮತ್ತು ಮಹಾಜನರು ಉಣ್ಣತಕ್ಕವು. ಒಂದು ದಿನವೂ ಒಂದು ವೇಳೆಯೂ ಅದನ್ನು ಹಸಿಯಗೊಡನು. ಗಂಟೆಯಂತೆ ಆಹಾರ ಪಾನಗಳು ಅದಕ್ಕೆ ಸಲ್ಲುತಿದ್ದವು. ಅದಕ್ಕೆ ಮಲಗಲು ಹಾಸಿಗೆ ಬೇರೆ.

ತಾನು ಹೊರಹೋಗಿ ಬಂದರೆ ಅದನ್ನು ಎತ್ತುವನು. ಮುದ್ದಿಟ್ಟು ತೊಡೆಯ ಮೇಲೇರಿಸುವನು. ಮೈ ಸವರಿ ಆನೆಯಾಡಿಸುವನು. ಕಿರಿಯ ಮಕ್ಕಳನ್ನು ಕಂಡರೆ ಆವ ಆನಂದವೋ ಅದೇ ಆನಂದ ಅದನ್ನು ಕಂಡಾಗ ಸುಂದರನಲ್ಲಿ ಮೂಡುತ್ತಿದ್ದುವು. ಮಾತ್ರವಲ್ಲ ಮನೆಯ ಮಗುವಿನಂತೆ ಅದು ಬಾಳುತ್ತಿತ್ತು.

ಸುಂದರನ ಗೆಳೆಯನು ಬರುವವನಿದ್ದನು. ಅದಕ್ಕಾಗಿ ಅವನು ಬೇಗನೆ ಎದ್ದಿರುವನು. ಎದ್ದು ಅತಿಥಿ ಸತ್ಕಾರಕ್ಕಿರುವ ಕೃತ್ಯದಲ್ಲಿ ಮಗ್ನನಾಗಿದ್ದನು. ಅದೊಮ್ಮೆ ಕುರ್ಚಿ ಮೇಜುಗಳನ್ನು ಸರಿಪಡಿಸುವನು. ಮತ್ತೆ ತೂಗಿದ್ದ ಪಟಗಳು ಎಂತಿವೆಯೆಂದು ನೋಡಿ ಅವುಗಳನ್ನು ಸಜ್ಜುಗೊಳಿಸಿದನು.

ಗಾಳಿಯು ಜೋರಾಗಿ ಬೀಸಿತು. ಮನೆಯ ಕಿಟಕಿಗಳು ಗಾಳಿಗೆ ಒಡೆಯತೊಡಗಿದವು. ಮನೆಯ ಸುತ್ತಮುತ್ತಲೂ ಇರುವ ಮರಗಳು ಜೋರಾಗಿ ಅಲುಗಿದುವು. ಕಿರಿಯ ರೆಂಬೆಗಳು ಮುರಿದುಬಿದ್ದುವು. ಗಾಳಿ

ಯೊಂದಿಗೆ ಮರಳು, ಧೂಳು, ಎಲೆ ಎಲ್ಲಾ ಹಾರಾಡತೊಡಗಿದುವು. ಮನೆಯ ಹಂಚುಗಳು ಕೆಲವೆಡೆ ಬಿದ್ದುವು. ಅದರ ಶಬ್ದ ಒಂದೆಡೆ ಕೇಳಿ ಸುತಿದ್ದಿತು. ತೂಗಿದ್ದ ಪಟ, ಕನ್ನಡಿ ತಾರೀಕು ಪಟ್ಟಿಗಳೆಲ್ಲಾ ಅದೊಮ್ಮೆ ತಲೆ ಕೆಳಗಾದವು. ಮೇಜಿಗೆ ಹಾಸಿದ ಬಟ್ಟೆ ಇನ್ನೊಂದೆಡೆ ಹೋಯಿತು. ಮನೆಯೆಲ್ಲಾ ಧೂಳಿಡಿಯಿತು. ಮಳೆ ಹನಿ ಬೀಳತೊಡಗಿತು. "ಬಂತೈ ಬಂತೈ ತೆಂಕಣ ಗಾಳಿಯು ಕೊಂಕಣ ಸೀಮೆಗೆ; ಬುಸುಗುಟ್ಟುತೆ ಬಂತೈ" ಎಂಬಂತಾಯಿತು. ಅಸ್ತವ್ಯಸ್ತವಾದ ಸಾಮಾನುಗಳನ್ನು ತಿರುಗಿ ಸುಂದರನು ಸರಿಪಡಿಸುತ್ತಾ ಬಂದನು. ಮುಚ್ಚಿದ ಕಂಡಿಗಳನ್ನು ತೆರೆಯತೊಡಗಿದನು. ಪಟಗಳನ್ನು ತೂಗೊಳಿಸಿ ಮುಚ್ಚಿದ ಬಾಗಿಲುಗಳನ್ನು ಸರಿಪಡಿಸುತ್ತಿದ್ದಾಗ ಕೂಂ ಎಂಬ ಕೂಗು ಕಿಟಿಕಿಯ ಕೆಳಗಿನಿಂದ ಕೇಳಬಂದಿತು. ಕೆಳಗೆ ಇಣಿಕಿ ನೋಡಿದನು. ಅಲ್ಲಿದ್ದಿತು ಅವನ ಮೋತಿ. ಕೂಡಲೇ ಆತನು "ಯಾರಾದರೂ ಅತಿಥಿಗಳು ಬರುವರೆಂದರೆ ಮನೆ ದನಕರುಗಳು ನಾಯಿಗಳೆಲ್ಲಾ ಉಪವಾಸ. ಇದನ್ನು ಯಾರೂ ನೋಡುವವರಿಲ್ಲವೇ? ಇತ್ತ ಕಡೆ ನೋಡಬಾರದೇನು. ಸೂರ್ಯನು ಮೇಲಕ್ಕೆ ಬಂದ. ಬಿಸಿಲು ಹರಡತೊಡಗಿದೆ. ಏನೋ ಗಾಳಿಬಂದಿತು. ಅದರೊಂದಿಗೆ ಬಿಸಿಲು ಮಳೆಯೂ ಕರೆಯಿತು. ಕಟ್ಟಿದ ನಾಯಿಯನ್ನು ಬಿಚ್ಚಲಿಲ್ಲ. ಮಾಯಿಸಲಿಲ್ಲ. ಅದಕ್ಕೆ ಇಂದು ನಿರಾಹಾರ. ಬಿಸಿಲಿನಿಂದ ಈ ಕಡೆ ಕಟ್ಟುವ ನೆನಪಾರಿಗೂ ಇಲ್ಲ. ಅದು ಪಾಪ ಬಿಸಿಲಿಗೆ ನೆಳಲಿನಡಿ ಸೇರಿತು. ನೆಳಲು ಮುದುರಿದಂತೆ ಅದು ತನ್ನ ದೇಹವನ್ನು ಮುದುರಿಸಿ ನಿಂತಿದೆ. ಎಲ್ಲಿರುವನು ಕೆಲಸದ ಕೃಷ್ಣ? "ರಾಮಾ, ಆ ಹುಡುಗನನ್ನು ಇತ್ತ ಎಳೆದು ತಾ, ಅವನನ್ನು ಸರಿಪಡಿಸುವೆನು" ಎಂದು ಗದರಿಸಿ ಆಜ್ಞಾಪಿಸಿದನು.

ಅಧಿಕಾರಿಗಳಿಗಿಂತಲೂ ಅಧಿಕಾರಿಗಳ ಕೆಲಸಗಾರರು ಕ್ರೂರರು. ರಾಜಸತ್ತೆಯೇ ತನಗೆ ದೊರಕಿಕೊಂಡಂತೆ ಚಾಕರಿಯವನಾದ. ಎರಡು ಬಾರಿ ಕೃಷ್ಣ ಎಂದು ಕೂಗಿದ. ಆ ಹುಡುಗನನ್ನು ಎಳೆಯುತ್ತಾ ಬಂದನು. ಕಿವಿಗಳೆರಡನ್ನು ಹಿಂಡಿ, ತಲೆಗೆ ಎರಡು ಕುಟ್ಟನ್ನು ಕೊಟ್ಟು ನೌಕರನು ಸುಂದರನೆದುರು ಕೃಷ್ಣನನ್ನು ನಿಲ್ಲಿಸಿದನು. ಆಗ ಅವನು ಅಳುವನ್ನು ಯಜಮಾನನ ಹೆದರಿಕೆಯಿಂದ ನುಂಗಿಕೊಳ್ಳುತಿದ್ದನು. ಎಷ್ಟು ನುಂಗಿ

ದರೂ ಕಣ್ಣಿನಿಂದ ನೀರಿಳಿಯುತಿತ್ತು. ಉಸಿರು ಅಳುವಿನೊಂದಿಗೆ ಸ್ವಲ್ಪ ಸ್ವಲ್ಪ ತಡೆಗಟ್ಟುತಿತ್ತು. ಬಿಕ್ಕಿ ಬಿಕ್ಕಿ ಅಳುತ್ತ "ಇನ್ನು ಹಾಗೆ ಮಾಡುವುದಿಲ್ಲ. ನೀರು ತರುತ್ತೇನೆ. ನಾಯಿಯನ್ನು ಮೀಯಿಸುತ್ತೇನೆ. ಕ್ಷಮಿಸಬೇಕು" ಎಂದು ಕೃಷ್ಣನು ಹೇಳಿದ.

ಸುಂದರನಿಗೆ ಕೃಷ್ಣನನ್ನು ಕಾಣುತ್ತಲೇ ಮೊಗವು ಆರಕ್ತವರ್ಣವಾಯಿತು. ಕಣ್ಣುಗಳು ಕೆಂಪೇರಿದುವು. ಹಲ್ಲು ಕಡಿಯತೊಡಗಿದನು. ಕೈಯೆತ್ತಿ ಏನು ಹೇಳುವೆ ಎಂದು ಕೈಹಿಡಿದು ನುಡಿಗೇಳ ತೊಡಗಿದನು. ಆಗ ಕೃಷ್ಣನು "ಬೆಳಗ್ಗೆ ಬಂದೆನು. ಹಾಸಿಗೆಯೆಲ್ಲಾ ಮುಡಚಿದೆನು. ಸ್ವಲ್ಪ ತಲೆ ಸುತ್ತುವಂತಾಯಿತು. ನಿನ್ನೆಯೇ ಉಣಲಿಲ್ಲ. ಬೆಳಗ್ಗಿನ ಗಂಜಿಯೂ ಮನೆಯಲ್ಲಿ ಆಗಿಲ್ಲ. ನಿನ್ನೆಯ ಸಂಬಳ ಸಿಕ್ಕಲಿಲ್ಲ. ಒಂದು ಪಾವು ಅಕ್ಕಿ ತರಲೂ ಗತಿ ಇಲ್ಲದಂತಾಯಿತು" ಎಂದು ಕಣ್ಣೀರು ಮಿಡಿಯುತ್ತಾ "ಧನಿ! ಇನ್ನೆಂದೂ ಹೀಗೆ ಮಾಡುವುದಿಲ್ಲ" ಎಂದು ಬೇಡಿದನು.

ಪ್ರಭಾತ 19-8-46



# ಎಣಿಕೆ

ಬಾಬು ನನ್ನ ಗೆಳೆಯ. ಅವನು ಧನಕುಬೇರನಲ್ಲ; ಅಲ್ಲದಿದ್ದರೂ ಅವನೊಬ್ಬ ಧನಾಢ್ಯ ವ್ಯಕ್ತಿಯ ಸಂಬಂಧಿಕ. ಗೆಳೆತನಕ್ಕೆ ಹಣ ಕುಲಗಳನ್ನು ಎಣಿಸುವ ಮಂದಿಗಳು ಹಲವರು. ಅಂತಹರಲ್ಲಿ ಅವನೂ ನಾನೂ ಸೇರಿದವರಲ್ಲ. ಇದು ನಮ್ಮ ಗೆಳೆತನಕ್ಕೆ ಒಂದು ಕಾರಣವಿದ್ದರೂ ಇರಬಹುದು. ಇನ್ನೂ ಹಲವಾರಿವೆ. "ಸಮಾನಶೀಲ ವ್ಯಸನೇಷು ಸಖ್ಯಂ" ಎಂಬ ಹಿರಿಯರ ಮಾತು ಸಖ್ಯ ವಿಷಯದಲ್ಲಿದ್ದರೂ ಆ ಮಾತು ಈ ಯುಗಕ್ಕೆ ಒಪ್ಪುವುದೇ? ಒಪ್ಪಲಾರದುದೇ? ಎಂಬುದು ನನಗೆ ಸಂದೇಹ! ನಿಮಗೂ ಅದರಲ್ಲಿ ಉಂಟಾಗದುಳಿಯದು. ಅಂತಾದರೆ ಇಂದು ಬಡವರು, ಬಡವರು; ಕೆಲಸಗಾರರು, ಕೆಲಸಗಾರರು; ಹೆಂಗಳು, ಹೆಂಗಳು; ಗಂಡಸರು, ಗಂಡಸರು; ಅದೇಕೆ ಸ್ನೇಹಿತರಾಗುವುದಿಲ್ಲ? ಇದಕ್ಕೆ ಮನಸ್ಸಿನ ಆಶಾಬಂಧ; ಇಲ್ಲವೇ ವಿಚಾರದ ವಿನಿಮಯಗಳು; ಸಹಾನುಭೂತಿ; ಮನಸ್ಸಿನ ಐಕ್ಯತೆ— ಇವೇ ಮುಖ್ಯಗಳೆಂದರೂ ತಪ್ಪೆನಿಸದು. ಅದೆಂತೂ ಇರಲಿ. ಬೆಳಗ್ಗಿನ ಹೊತ್ತು ಮೈದಾನದ ಕಡೆಗೆ ತೆರಳೋಣವೆಂದು ನನ್ನನ್ನು ಸೆಳೆದ. ಅವನೊಂದಿಗೆ ಹೋಗಬೇಕಾಯಿತು. ಹೋದೆವು. ದೂರದಿಂದ ಮೈದಾನಕ್ಕೆ ಮುಟ್ಟಿದಾಗ ಅದೊಂದು ಆಸನದ ಮೇಲೆ ಒಬ್ಬ ಯುವತಿಯು ನಿದ್ದೆಹೋಗುತ್ತಿರುವುದನ್ನು ಕಂಡೆವು. ಅವಳು ಗಾಢನಿದ್ರೆಯಲ್ಲಿದ್ದಳು. ಮೈದಾನದ ಬಳಿ ಹೋಗುತ್ತಿರುವವರೆಲ್ಲರೂ ಅದೊಮ್ಮೆ ನಿಲ್ಲುವರು; ಅವಳನ್ನು ನೋಡುವರು. ಅದೆಷ್ಟು ಮಂದಿ ನಮ್ಮೂರ ಮೈದಾನದಲ್ಲಿ ಹೋಗುತ್ತಿರುವರೆಂದು ನಾವು ಹೇಳುವುದು ಬೇಡ. ಒಮ್ಮೆ ಕಣ್ಣೆತ್ತಿ ಆಕೆಯ ಕಡೆಗೆ ನೋಡುವರು; ಮುಂದೆ ಚೆಲುವನ್ನು ಕಂಡು ಕುದಿಯುವರು; ನಡೆಯುವರು; ತರುಣರು ಮನದಲ್ಲಿ ಹರ್ಷಿತರಾಗುವರು; ಮುದುಕರು ಮನದಲ್ಲಿ ಕಂಡು ಕೊರಗುವರು; ಯುವತಿಯರು ಲಜ್ಜೆಯಿಂದ ಮುಖವನ್ನು ಕೆಳಕ್ಕೆ ಬಗ್ಗಿಸಿ ನಡೆಯುವರು.

ಬೆಳಗ್ಗಿನ ಮೇಚನ್ನು ಕಾಣುವ ಆಶೆ ಬಾಬುವದಿತ್ತು. ಮೇಚಿನ ಸ್ಥಳ ಸ್ವಲ್ಪ ದೂರದಲ್ಲಿ.

ಬಾಬು ಹೇಳಿದ:—"ಹೌದೊ ಸ್ವಾಮಿ! ಇವಳಿಗೆ ಮಲಗಲು ಸ್ಥಳವೆಲ್ಲೂ ಸಿಗಲಿಲ್ಲ ನೋಡಿ!"

ನಾನು:—"ಯಾರೋ ಕುಲಟೆ."

ಬಾಬು:—ಕುಲಟೆಯರು ಹೀಗೆ ಲಜ್ಜೆಯಿಲ್ಲದೆ ನಿದ್ರೆಗೈಯ್ಯರು. ಲಜ್ಜೆಯಿರುವಳಾದರೆ ವಾರಸ್ತ್ರೀಯಲ್ಲ.

ನಾನು:—ಕುಲವಧೂ ಜನರೂ ವಾರಸ್ತ್ರೀಯರೂ ಒಂದೇ ರೀತಿಯ ವವಹಾರವನ್ನು ತುಂಬಾ ಮಾಡುತ್ತಾರೆ. ನಿಕಾಕಿನಿ ಕುಲಟೆ ಇಂತಿರಲಾರಳು. ಅವಳ ಬೆಡಗು ಒಯ್ಯಾರದಿರವನ್ನು ನೋಡಬಾರದೆ? ಚಿತ್ರದ ಬೊಂಬೆಯಂತೆ ಕಾಣುವಳು.

ಬಾಬು:—ಚಿತ್ರದ ಬರವಣಿಗೆಯ ಕಲೆಯನ್ನು ವೇಶ್ಯೆಯರಿವಳು. ಅದನ್ನು ಮರೆಸಿಟ್ಟು ಕೆಲಸ ಮಾಡಬಲ್ಲಳು ವೇಶ್ಯೆ. ಈ ರಹಸ್ಯವನ್ನು ಆಕೆ ಲೋಕಕ್ಕೆ ತಿಳುಹುವಳು. ಏನೂ ಇರಬಹುದು. ಅವಳ ಮೊಗದಲ್ಲಿ ಏನಿದೆ ಕಾಣು. ಕೆಂಪಾದ ಬೊಟ್ಟು ಹೊಳೆಯುವುದು.

ಮಾತು ಬೆಳೆಯಿತು; ಅವನು "ಕುಲ ವಧುವಿನಂತೆ ಇರುವಳೆ"ಂದ. ಆಗ ನಾನು, "ವಯಸ್ಸು ಮೀರಿಲ್ಲ; ಯುವತಿ; ತುಂಬುವ ಗಡಸುಗಾರ್ತಿ; ರೂಪಯೌವನಗಳು ಏನಾದರೂ ಒಂದು ಬೆರೆದಿವೆ" ಎಂದೆ. ಕುಲವಧುವು ನೈದಾನದ ಮಂಚದಲ್ಲಿ ಒರಗಿರುವುದು ಅಸಂಭಾವ್ಯವೆಂದು ಅವನಿಗೂ ಕಂಡಿತು; ಹೇಳಿದ.

ಇಬ್ಬರು ಮುದುಕರು ಅದಾಗಲೇ ಬಂದರು. ಅವರೂ ಅವಳನ್ನು ಕಂಡರು. ಅದರಲ್ಲಿ ಮೊದಲನೆಯವ ತುಂಬಾ ಹರಯದವ. ಅವನ ಕೆನ್ನೆ ಬಾಯೊಳಕ್ಕೆ ಸೇರಿದೆ; ಹಲ್ಲುಗಳು ಮಾಯವಾಗಿದ್ದುವು; ಕಣ್ಣು ಆಳವಲ್ಲಿತ್ತು; ಬೆನ್ನು ಬಾಗಿತ್ತು; ಕೈ ಬೆತ್ತವನ್ನು ನಡೆಯಿಸುತ್ತಿತ್ತು. ಎರಡನೆಯವ ಸಂಪೂರ್ಣ ಹಾಗಿಲ್ಲ. ಹೃಷ್ಟಪುಷ್ಟ ಗಾತ್ರ; ಒಳ್ಳೇ ಉಡಿಗೆತೊಡಿಗೆಯಿದೆ. ನೋಡಿದರೆ ವಿರಾಮ ವೇತನವನ್ನು ಪಡೆದು ಸುಖಜೀವಿಯಾಗಿರುವ ಅಸಾಮಿಯಂತೆ ತೋರಿಬರುತ್ತಿತ್ತು.

1 ನಿಯಮ:—ಇದೇ ಇಂದಿನ ಇಪ್ಪತ್ತನೇ ಶತಮಾನ. ಅದರ ಸಂಪೂರ್ಣ ಪರಿಚಯ ಮತ್ತು ನೆಲೆ.

2ನೆಯವ: — ಹಿಂದೂದೇಶ ಲೋಕದಿಂದ ಹೊರಗಿನದೇ?

1ನೆಯವ: - ಇದನ್ನು ಸದಾಚಾರವೆನ್ನಬೇಕೇ?

2ನೆಯವ: — ಆಚಾರಗೀಚಾರಗಳ ವಿಷಯದಲ್ಲಿ ಪೋಷಕರಾಗಿ ಬಾಳುವ ಕಾಲ ಇದಲ್ಲ.

1ನೆಯವ: — ಛೇ, ಎಂತಹ ಹುಡುಗಿ! ಯಾವ ಮನೆಯವಳೋ!

2ನೆಯವ: — ವಿಲಾಸಿನಿಯೆಂದು ಬೆಡಗು ಒಯ್ಯಾರದುಡುಗೆಯಿಂದ ತನಗೆ ತಿಳಿಯದೇ!

1ನೆಯವ: — ವೇಶ್ಯೆಯರು ಇಂತಹ ಮರುಳಾಟಿಗೆಯವರಲ್ಲ.

2ನೆಯವ: — ದೊಡ್ಡ ಕುಲದ ಹುಡುಗಿಯರೇ ಅಂತಹರು.

1ನೆಯವ: — ಹೊಸ ಶಿಕ್ಷಣ ಕ್ರಮ; ಸ್ತ್ರೀಸ್ವಾತಂತ್ರ್ಯ ಇವುಗಳ ಕಾರ್ಬಾರು.

2ನೆಯವ: — ಜೀವನವೇ ಹಾಳಾಯಿತು; ಲೋಕವೇ ಕೆಟ್ಟಿತು. ಇದು ನರಕದ ಹೊಂಡಕ್ಕೆ ಬೀಳುವುದು.

1ನೆಯವ: — ಕಂಡರೆ ಸ್ವರ್ಗಕ್ಕೆ ಹೋದಂತಾಗುವುದು.

2ನೆಯವ: — ಪ್ರಾಯ ಮೀರಿತು.

1ನೆಯವ: — ಆದರೆ, ಕಣ್ಣಿಗೆ ಮಾತ್ರ ಮನಸ್ಸಿಗೆ ಪ್ರಾಯ ಮೀರಲಿಲ್ಲ.

2ನೆಯವ: — ಕಣ್ಣಿನಿಂದ ನೋಡು. ಹೊಟ್ಟೆಯನ್ನು ಉರಿಸು; ಸಾಕು.

1ನೆಯವ: — ನನ್ನ ಮನಸ್ಸು ತರುಣನಾಗಲು ಎಳಸುತ್ತಿದೆ. ಇಂದು ನಾಳೆಯ ಜೀವನ. ಅದು ಮಾತ್ರ ಉಳಿದಿದೆ. ಅಂದು ವಸಂತಕಾಲ. ಆ ಕಾಲದಲ್ಲಿ ಇಂತಹ ದೃಶ್ಯವೇ ಕಾಣಸಿಗುತ್ತಿದ್ದಿಲ್ಲ. ಇಂದು ಎಲ್ಲಿ ನೋಡಿದರೂ ಎಂತಹ ರೂಪ............

2ನೆಯವ: — ಇವರ ಕಣ್ಣಿಗೆ ಕಿರಿಕಿರಿಯುಂಟಿದ್ದವರೂ ಬೇಡದವರೂ ಲೋಕದಲ್ಲಿದ್ದರೆ ಮುದುಕಮುದುಕಿಯರು ಮಾತ್ರ.

ಅವರಿಬ್ಬರ ಸಂಭಾಷಣೆಯೂ ಬೆಳೆಯಿತು. ಪ್ರೇಮಶರಧಿಯ ತಡಿಯಲ್ಲಿ ಬಂದು ನಿಂದವರಾದರು. ಕೊನೆಗೆ ತಮ್ಮ ಮಕ್ಕಳು ಆಕೆಯ

ಪುಗನು ವಿಷಯದಲ್ಲಿ ಅತೃಪ್ತರಾಗಿ ಬಲಾತ್ಕರಿಸುವರೆನ್ನುವಲ್ಲಿಗೆ ಬಂದು ನಿಲಿಯಿತು. ಅವರು ನಡೆದರು.

ಇಬ್ಬರು ಹೆಂಗಸರು ಅದಾಗಲೇ ಅಲ್ಲೇ ಬಂದರು. ಓರ್ವಳು ವೃದ್ಧಾಪ್ಯಕ್ಕೆ ಕಾಲಿಟ್ಟವಳು; ಇನ್ನೊಬ್ಬಳು ನಡುಹರೆಯಕ್ಕೆ ಕಾಲಿಡುವವಳು. ಅವರ ಕಣ್ಣು ಅವಳಲ್ಲಿ ಬಿತ್ತು. ತಾಯಿ ಮಕ್ಕಳಂತೆ ಭಾಸವಾಗುತಿತ್ತು.

ತಾಯಿ:—ನೋಡು! ನಾಚುಗೆಯಿಲ್ಲದವಳನ್ನು!

ಮಗಳು:—ಉಡಿಗೆತೊಡಿಗೆ ಒಯ್ಯಾರ ಕಂಡರೆ ರಂಭೆಯಂತೆ ದೇವೇಂದ್ರನ ಆಸ್ಥಾನದವಳೆಂದು ಕಾಣುವಳು.

ತಾಯಿ:—ಆದುದರಿಂದಲೇ ಹೆಂಗಸರಿಗೆ ಸ್ವಾತಂತ್ರ್ಯ ಬೇಡವೆಂದು ಗಂಡಸರು ಹೇಳುವರು.

ಮಗಳು:—ಕುಲೀನಳಂತೆ ತೋರದೆ ಬೆಲೆವೆಣ್ಣಿನಂತೆ ಕಾಂಬಳು.

ತಾಯಿ:—ಬೆಲೆವೆಣ್ಣಾದರೇನು? ಸ್ತ್ರೀ ಸಮಾಜಕ್ಕೇ ಕಲಂಕವು ಬರುವುದು.

ಮಗಳು:—ಎಂತಹ ಆನಂದದಲ್ಲಿ, ಮನೆಯಲ್ಲಿ ಮಲಗಿದಂತೆ ನಿದ್ರಿಸಿರುವಳು!

ತಾಯಿ:—ನಿರ್ಲಜ್ಜೆ; ಆದರೆ ಇಂದಿನ ಹುಡುಗಿಯರಿಗೆ ಸೈಕಲಲ್ಲಿ ಹೋಗುವಾಗ; ಶಾಲೆಗೆ ದೊಡ್ಡ ಕುದುರೆಗಳಂತೆ ಒಯ್ಯಾರದಿಂದ ನಡೆಯುವಾಗ; ಕಿರಿಕಿರಿ ಮಾತನಾಡುವಾಗ: ಒಂದಿಷ್ಟೂ ನಾಚುಗೆಯಿಲ್ಲ. ದೊಡ್ಡ ಕಲಿಯುವುದು, ಸ್ವಾತಂತ್ರ್ಯ!! ನಾಚಿಕೆ ಬಿಟ್ಟರೆ ಸಾಕು.

ಮಗಳು:—ಇದನ್ನೇ ನಾನು ಮಾತಾಡುವಾಗ ನಿಮಗೆ ಕುಶಿ ಇಲ್ಲ. ರಾತ್ರಿ ಬಂದು ಬಿದ್ದಿರಬಹುದು. ಏನೂ ಇರಲಿ. ತಿಳಿಯೋಣ! ಹೋಗಿ ಎಬ್ಬಿಸೋಣ; ನಮಗೇ ನಾಚುಗೆ.

ಮುಂದೆ ಅವರಿಬ್ಬರೂ ಗಟ್ಟಿಯಾಗಿ ಹಿಡಿದಲುಗಿಸಿ ಎಬ್ಬಿಸಿದರು. "ದೇವೀ! ಸೂರ್ಯನು ಮೇಲಕ್ಕೆ ಬಂದನು. ಅದೋ ನೋಡು" ಎಂದರು. ಅವಳು ಕಣ್ತೆರೆದಳು. "ಓ, ಏನಾಯಿತು! ದೇವರೇ! ಹೊತ್ತಾಯಿತು! ನಾನು ನಿದ್ರಿಸಿದೆನೇ! ಎರಡು ದಿನಗಳಿಂದ ಆಹಾರ ಸರಿಯಾಗಿ ಇಲ್ಲ.

ಮನೆಯಲ್ಲಿ ನಿನ್ನೆಯ ರಾತ್ರಿ ಪತಿದೇವನಿಗೆ ಬಹಳ ಕಾಯಿಲೆ. ಸಿದ್ದೆಯಿರಲಿಲ್ಲ. ಬೆಳಗ್ಗೆ ಗಂಜಿಯಿರಲಿಲ್ಲ. ಕಾಫಿ ಕಂಪೆನಿ ಕೆಲಸಕ್ಕೆ ಹೋಗುವೆ. ಇಲ್ಲಿಗೆ ಹತ್ತಿದಾಗ ಕಣ್ಣು ಕತ್ತಲೆಗಟ್ಟಿತು. ಈ ಮಂಚದಲ್ಲಿ ಕುಳಿತೆ. ಮತ್ತೆ ಗೊತ್ತಿಲ್ಲ" ಎಂದಳು. ತಿರುಗಿ ಅವಳು ಮೈಮರೆದಳು. ತಾಯಿ ಮತ್ತು ಮಗಳು ಅವರಿಬ್ಬರೂ ಅವಳನ್ನು ಮುಂದೆ ಕುದುರೆಗಾಡಿಯಲ್ಲಿ ಕುಳ್ಳಿರಿಸಿ ಕರಕೊಂಡು ಆಸ್ಪತ್ರೆಗೆ ನಡೆದರು. ಮುಂದೇನಾಯಿತೋ ತಿಳಿಯೆವು.

ಬಾಬು:— ಅಕ್ಕಿಗೆ ಬೆಲೆ ಇನ್ನೂ ಏರಿಸಿದರೆ........

ನವಭಾರತ 13-9-1943

# ಈ ಹುಚ್ಚು

ಗಂಟೆ ಒಂಭತ್ತು ಬಡೆಯಿತು. ಹುಡುಗರೂ ಹುಡುಗಿಯರೂ ಶಾಲೆಗೆ ಹೋಗುತ್ತಿದ್ದಾರೆ. ರಾಮರಾಯರ ಚಾಕರಿಯು ರಾಧೆಯು ತನ್ನ ಮನೆಗೆ ಬಂದಳು.

ಅವಳ ಮಗು ಕಮಲೆ,—ಇನ್ನೂ ಚಾಪೆಯಿಂದ ಎದ್ದಿಲ್ಲ. ಕರೆದಳು. ಎಲ್ಲರೂ ಶಾಲೆಗೆ ಹೋದರು. ಏಕೆ ಮಲಗಿರುವೆ? ಬೇಗನೆ ಮುಖ ತೊಳೆ. ಗಂಜಿಯಲ್ಲಿದೆ. ಉಂಡು ಹೊರಡು!

ಕಮಲೆಯು ಉತ್ತರವೇ ಬೇರೆ. "ಅಮ್ಮಾ! ನಾನು ಶಾಲೆಗೆ ಹೋಗ ಲಾರೆ. ನನಗೆ ಸಿಲ್ಕಿನ ರವಕೆಯಿಲ್ಲ. ಸೀರೆ ಇಲ್ಲ. ನನ್ನ ಕ್ಲಾಸಿನ ಆ ಬಾಳಿಗರ ಮಗಳು ಇಂದಿರೆ ಎಂತಹ ಸೀರೆ ಕುಪ್ಪಸಗಳನ್ನು ತೊಟ್ಟು ಶಾಲೆಗೆ ಬರುವಳು; ಅವಳು ನನ್ನ ಕ್ಲಾಸಿನವಳು. ನನ್ನ ಸೀರೆ ರವಕೆ ಗಳಿಗೆ ವರುಷ ಹತ್ತಿರವಾಗುತ್ತಾ ಬಂದಿತು. ಇನ್ನೂ ಇಲ್ಲ. ಸಿಲ್ಕಿನ ಒಂದು ಜೊತೆ ರವಕೆಯನ್ನು ನನಗೆ ಮಾಡಿಸಿಕೊಡಬಾರದೇ?"

ರಾಧೆಯು ವಿಚಾರವೇ ಬೇರೆ. ಹೆಣ್ಣು ಹುಡುಗಿ. ನಾಲ್ಕು ಅಕ್ಷರ ಕಲಿಸಿದರಾಗಬಹುದು. ಅದರಿಂದ ಅವಳಿಗೆ ಮುಂದೆ ಏನಾದರೂ ಜೀವ ನೋಪಾಯಕ್ಕೆ ತಕ್ಕ ವರಸಿಗಬಹುದೆಂದೇ ಅವಳಾಸೆ. ಕಮಲೆಯು ಹಟ ಮಾರಿತನವು ಅವಳನ್ನು ದುಃಖಕ್ಕೆ ಇಳಿಸಿತು. ಏನು ಮಾಡುವಳು. ಪತಿಯು ಕಾಲವಾಗಿ ಮೂರು ವರ್ಷವಾಯಿತು. ಹಗಲಿಡೀ ದುಡಿದು ತನ್ನ ಪ್ರೀತಿಯ ಮಗಳೊಬ್ಬಳನ್ನು ಕಲಿಸುತ್ತಿದ್ದಾಳೆ. ಸಂಬಳ ಬೇರೆ. ಪುಸ್ತಕದ ಖರ್ಚು ಬೇರೆ. ಅನುದಿನ ಇವರಿಬ್ಬರಿಗೆ ಬೇಕಾದ ಹೊಟ್ಟೆಯ ಹೊರೆ ಬೇರೆ. ಅವಳ ಕೈಯಲ್ಲಿ ಹಣವಿಲ್ಲ. ಏನೆನ್ನುವಳು.

"ಮಗೂ, ಹಟ ತೊಡಬೇಡ. ನಾನು ನಿನ್ನನ್ನು ಕಲಿಸ ಬಯಸು ತ್ತೇನೆ. ಸೀರೆಗೆ ಬೇಕಾದ ಹಣವೆಲ್ಲಿಂದ ತರಲಿ! ಮನೆಯಲ್ಲಿ ಹಿರಿಯರದ್ದಿಲ್ಲ!"

ಕಮಲೆಯು ಸಿಡಿಮಿಡಿಗೊಂಡು, "ಏನು, ನಾನು ಕಲಿಯಬೇಕೇ? ನನ್ನ ಕ್ಲಾಸಿನವರೊಂದಿಗೆ ನಾನಿರಬೇಕಾದರೆ ಅಂತಹ ಪೋಷಾಕೇ ಬೇಕು.

ನನಗೆ ನಾಚಿಕೆ ಇದೆ. ಅವರೊಂದಿಗೆ ಕುಳಿತುಕೊಳ್ಳುವಾಗ ಅಂತಿರ ಬೇಡವೇ? ನನಗೆ ಎರಡು ಜೊತೆ ಸೀರೆ ರವಕೆಗಳು ಬೇಕಾದುವು."

ರಾಧೆಯು, ಏನನ್ನಲಿ! ಚಿಲ್ಲರೆ ಖರ್ಚಿನಿಂದ ಹೇಗಾದರೂ ವಿದ್ಯಾಭ್ಯಾಸವನ್ನು ಮಾಡಿಸಬೇಕೆಂದಿರುವಳು. ಕಡೆಗೆ ತನ್ನ ಕೈಯಲ್ಲಿರುವ ಚಿನ್ನದ ಬಳೆಗಳನ್ನು ಮಾರಬೇಕಾಯಿತು. ಸೀರೆ ಕುಪ್ಪಸಗಳಂತೂ ಬಂದವು.

ಮಾರನೆಯ ದಿನ ಕಮಲೆಯು ಈ ಆಡಂಬರದ ತೊಡಿಗೆಯನ್ನು ಧರಿಸಿ ಶಾಲೆಗೆ ಹೋದಳು. ಅವಳ ಗೆಳತಿಯರು ಅವಳ ವೇಷವನ್ನು ಕಂಡು ಸಂತೋಷಗೊಂಡರು. ಕಮಲೆಯ ತಾಯಿಯ ಪಾಡೇನು? ಅವಳು ವ್ಯಸನದಿಂದಿರುವಳು. ಇದನ್ನವರು ತಿಳಿವರೇ?

* * * *

ರಘುವು ಅದೇ ಕ್ಲಾಸಿನಲ್ಲಿ ಕಲಿಯುತ್ತಾನೆ. ಅವನು ಸಾಯಂಕಾಲ ಮನೆಗೆ ಬಂದು, "ಅಪ್ಪಾ ನನಗೆ ಮೂರು ನೋಟು ಬೂಕುಗಳು ಬೇಕು. ಎರಡು ಕ್ವಯರ್ ಕಾಗದವೂ ಬೇಕು; ನಾಡದು ಪರೀಕ್ಷೆ; ಇವುಗಳಿಲ್ಲದೆ ಕ್ಲಾಸಿಗೆ ಮಾಸ್ಟರು ದಾಟಲು ಬಿಡರು. ಒಂದು ತಿಂಗಳಿನಿಂದ ನೋಟು ಪುಸ್ತಕಗಳಿಲ್ಲ. ಲೆಕ್ಕಕ್ಕಿಲ್ಲ, ಕಾಂಪೋಸಿಷನಿಗಿಲ್ಲ, ನೋಟ್ಸಿಗಿಲ್ಲ."

ಕೂಲಿ ಕೆಲಸದ ಅವನ ತಂದೆ "ಎಲ್ಲಿಂದ ಹಣವನ್ನು ತರಲಿ? ಇಂದು ಅಕ್ಕಿಗೆ ಕಾಸಿಲ್ಲ" ಎಂದನು.

ರಘು:—"ನಿನಗೆ ಸಂಬಳ ಮಾಫಿ; ಕ್ಲಾಸಿಗೆ ಶುಚಿಯಾಗಿ ಬರ ಬೇಕು; ಹರಕು ಬಟ್ಟೆ, ಕೊಳಕು; ಪುಸ್ತಕವಿಲ್ಲ, ಕಡ್ಡಿ ಇಲ್ಲ. ನಾಳೆ ಹೀಗೆ ಬಾ" ಎಂದು ಮಾಸ್ಟರು ಗದರಿಸಿದರು. ಈ ರೀತಿಯಾಗಿ ತಂದೆಗೆ ತನ್ನ ಸಂಕಟವನ್ನು ತಿಳಿಸಿದ.

ಅವನ ತಂದೆಯು ಏನೂ ಮಾತೆತ್ತಲಿಲ್ಲ. ಅವನೇನೆನ್ನಬೇಕು! ಅವನ ದೊಡ್ಡ ಕುಟುಂಬವು ಇಂದು ರಾತ್ರಿ ಏಕಾದಶಿ ವ್ರತವನ್ನು ಹಿಡಿಯಬೇಕು. ಅದೊಂದೇ ಚಿಂತೆ.

* * * *

ಶಾಲೆಯಲ್ಲಿ ಘಂಟೆ ಬಡೆದಾಯಿತು. ಮಾಸ್ತರು ಹುಡುಗರ ಹಾಜರಿಯನ್ನು ಕರೆದರು.

ಮಾಸ್ತರು –"ರಘೂ, ಪುಸ್ತಕವನ್ನು ತಂದಿರುವೆಯೋ? ಬಟ್ಟೆಯನ್ನು ಬೇರೆ ಮಾಡಿರುವೆಯೋ?" ಎಂದು ಗಟ್ಟಿಯಾಗಿ ಕೇಳಿದರು.

ರಘುವು ಒಂದು ಮೂಲೆಯಲ್ಲಿದ್ದ. ಅಲ್ಲಿಂದ ಮೆಲ್ಲನೆ ಎದ್ದು ನಿಂತನು. ಅವನ ಮುಖದಲ್ಲಿ ಬೇರೆ ಹುಡುಗರಂತೆ ಉಜ್ವಲವಾದ ಕಾಂತಿ ಇಲ್ಲ, ನಗೆ ಇಲ್ಲ, ತುಟಿ ಒಣಗಿದೆ, ಕಣ್ಣುಗಳು ಬಾಡಿವೆ. ಅಲ್ಲಲ್ಲಿ ಹರಿದ ಒಂದು ಶರ್ಟನ್ನು ಹಾಕಿದ್ದಾನೆ. ರಕ್ಷಾಪತ್ರವಿಲ್ಲದ ಒಂದು ಇಂಗ್ಲಿಷ್ ಪುಸ್ತಕವಿದೆ. ಒಂದೆರಡು ಕಾಗದಗಳೂ ಹೋಗಿವೆ. ಎರಡು ಮೂರು ಕಾಗದದ ತುಂಡುಗಳಿವೆ. ಸಹಪಾಠಿಗಳಲ್ಲಿ ಕೆಲವರು ಅನುಕಂಪದಿಂದ ನೋಡುತ್ತಾರೆ. ಇನ್ನು ಕೆಲವರು ತಮಾಷೆಯಿಂದ ನೋಡುತ್ತಿದ್ದಾರೆ. ಮತ್ತೆ ಕೆಲವರು ಸುಮ್ಮನಿದ್ದಾರೆ.

ಉಪಾಧ್ಯಾಯರಿಗೆ ಅವನ ಮುಖವು ಕಂಡಿತು. ಬಾಡಿದ ಮುಖವನ್ನು ಕಂಡರು. ಅವರು ತನ್ನ ಶಿಕ್ಷೆಗೆ ಬೆದರಿ ಹೀಗೆ ಕಾಣುವುದೆಂದು ವಿಚಾರಿಸುವುದಲ್ಲದೆ ಮತ್ತೇನು? "ಏನೋ ನಾನು ನಿನ್ನೊಡನೆ ನಿನ್ನೆಯೇ ಹೇಳಿರುವೆನು. ನಾಳೆಗೆ ಇನ್ಸ್ಪೆಕ್ಟರರು ಬರುವರು. ಹೊರಗೆ ಹೋಗು."

ರಘುವು ಮಾತೆತ್ತದೆ, ಹಿಂದು ಮುಂದು ನೋಡದೆ ಹೊರಗೆ ಹೋದನು. ಕ್ಲಾಸಿನಲ್ಲಿ ಪಾಠವು ಕೋಲಾಹಲದಿಂದ ನಡೆಯಿತು. ಅರ್ಧ ಗಂಟೆಯು ಪಾಠವಾಯಿತು. ಜಗಲಿಯಿಂದ ಒಂದು ಶಬ್ದವು ಕೇಳಿತು. ಗಂಟೆಯೂ ಬಡೆಯಿತು. ಎಲ್ಲರೂ ಸದ್ದನ್ನು ಕೇಳಿ ಹೊರಗೆ ಓಡಿಬಂದರು. ನೋಡುವುದೇನು? ರಘುವು ಬಿದ್ದಿದ್ದಾನೆ. ಕಣ್ಣೀರಿನಿಂದ ಆ ಹರಕು ಅಂಗಿ ಒದ್ದೆ ಆಗಿದೆ. ಎಲ್ಲರೂ ಅವನನ್ನು ಎತ್ತಿದರು. ಮಾಸ್ತರರೂ ಬಂದರು. ಕ್ಲಾಸಿಗೆ ಕರತಂದರು.

ಮಾಸ್ತರು: –"ರಘೂ ನಿನಗೇನಾಯಿತು!"

ರಘು:–"ತಲೆ ಸುತ್ತಿತು."

ಮಾ—"ನೀನು ತಂದೆಯ ಹತ್ತಿರ ಕಾಗದ ಪುಸ್ತಕಗಳಿಗೆ ಹೇಳಿದೆಯೇ?"

ರಘು—"ಹೌದು, ಹಣವನ್ನು ಕೊಡಲಿಲ್ಲ!"

ಮಾ—"ಕಮಲೆಯು ಹಿಡಿದಂತೆ ಮುಷ್ಕರವನ್ನು ನಿನಗೂ ಹಿಡಿಯಬಾರದಿತ್ತೇ?"

ರಘು—"ನಾನು ನಿನ್ನೆ ಮಧ್ಯಾಹ್ನ ಮಾತ್ರ ಉಂಡಿರುವೆನು [ಎಂದು ಗದ್ಗದ ಕಂಠದಿಂದ ಹೇಳಿದನು.]

ಮಾ—"ನಿನ್ನ ತಂದೆಗೇನು ಕೆಲಸ?"

ರಘು—"ಕೂಲಿ ಕೆಲಸ."

ಮಾ—"ಕೂಲಿಯುವನೋ?"

ರ—"ಅಂಗಡಿಯಿಂದ ದಿನಾಲು ಕೆಲಸ ಮಾಡಿದ ಸಂಬಳದಿಂದ ಅಕ್ಕಿ ಬೇಳೆಗಳನ್ನು ತರುವುದು. ಅದು ನಮ್ಮ ಕುಟುಂಬಕ್ಕೆ ಸಾಕಾಗುವುದಿಲ್ಲ."

ಮಾ—"ನೀವೆಷ್ಟು ಮಂದಿ ಇರುವಿರಿ"

ರ—"ಒಟ್ಟಾರೆ ೮ ಮಂದಿ."

ಮಾ—"ನೀನು ಹಣವನ್ನು ಕೇಳಿದಾಗ ತಂದೆಯವರು ಏನು ಹೇಳಿದರು?"

ರ—"ಏನೂ ಮಾತೆತ್ತಲಿಲ್ಲ. ಸುಮ್ಮನಿದ್ದರು. ನಿನ್ನೆ ರಾತ್ರೆ ಹೋದವರು ಶಾಲೆಗೆ ಬರುವವರೆಗೂ ಬಂದಿಲ್ಲ."

ಉಪಾಧ್ಯಾಯರು ಮುಂದೆ ಏನೂ ಕೇಳಲಿಲ್ಲ. ಅವನನ್ನು ಮನೆಗೆ ಕಳುಹಿದರು.

ಸಾಯಂಕಾಲ ಶಾಲೆ ಬಿಟ್ಟಿತು. ರಘುವಿನ ಮನೆಯ ದಾರಿಯಾಗಿ ಹುಡುಗರು ಹೋಗುತ್ತಿರುವರು. ಆಗ ಅವನ ಮನೆಯಲ್ಲಿ ಆರ್ತನಾದವು ಕೇಳುತ್ತಿದೆ. ಹುಡುಗರೆಲ್ಲಾ ಹೋದರು. ಅವನ ತಂದೆಯು ಹಾವು ಕಡಿದು ಸತ್ತಿರುವನು.

ಕಮಲೆಯು ಇದನ್ನರಿತಳು. ಮನೆಗೆ ಬಂದಳು. ತಾಯಿಯೊಡನೆ ಕ್ಷಮೆ ಕೇಳಿದಳು. ರಘುವಿನ ಕತೆಯನ್ನು ಹೇಳಿದಳು. ತಾಯಿಯಿಂದ ಬಳೆಯನ್ನು ಮಾರಿಸಿದುದಕ್ಕೆ ಸಂತಾಪಗೊಂಡಳು. ನಾನೆಂದಾದರೂ ಈ ಅವಸ್ಥೆಗೆ ಈಡಾಗುವೆನೋ ಎಂದು ನೆನೆದಳು. ತಾಯಿಯೊಡನೆ ತನ್ನ ತಪ್ಪಿಗೆ ಕ್ಷಮೆ ಕೇಳಿದಳು.

"ನಾನೆಂದೂ ದುರ್ವ್ಯಯಕ್ಕೆ ಹಟವನ್ನು ತೊಡೆನು" ಎಂದಳು.

ಆಗ ಅವಳ ತಾಯಿ —ಮಗಳೇ ನೀನೆಂದೂ ದೊಡ್ಡವರ ಹುಚ್ಚನ್ನು ಮಾಡಬೇಡ. ಇಂದಿರೆಯನ್ನು ಅನುಸರಿಸುವ "ಹುಚ್ಚು" ಹಿಡಿದಾಗ ರಘುವಿನ ನೆಲೆಯನ್ನೂ ನೋಡಬೇಕು. ಶಾಲೆಗಳಲ್ಲಿ ಚರಖಾ ಶಿಕ್ಷಣ ಬರಲಿ ಎಂದಳು.

ಪ್ರಭಾತ 21-5-1939



# ಕೊಗ್ಗ

ಕೊಗ್ಗನೆಂದರೆ ಊರಿನವರಿಗೆಲ್ಲಾ ಗೊತ್ತು. ಅವನು ಒಬ್ಬ ಭಿಕಾರಿ. ಕಾಲುಗಳು ಸರಿಯಿರದ ಪೋಟ. ಹರಯುವೇನೂ ಇಳಿಯುವ ಹೊತ್ತಿನ ದಲ್ಲ ಊರುಗೋಲೂರಿ ಬೀದಿ ಬೀದಿಯಲೆಯುವ. ಹೊಟ್ಟೆಗಾಗಿ ಬೇಡುವವ ಅವನದಲ್ಲ ತಪ್ಪು; ಹೊಟ್ಟೆಯದು. ಹೊಟ್ಟೆಯ ಹಸಿವಡಗಿ ಸಲು ಈ ವೃತ್ತಿಗೊಂಡಿರುವ. ಕಾಲುಗಳು ಸರಿಯಿರದ ಈತನು ಆವುದನ್ನು ಮಾಡಬಲ್ಲ!

ಕೊಗ್ಗನು ಕಿರಿಯನಾಗಿದ್ದಾಗ ಹೀಗಿರಲಿಲ್ಲ. ಅವನು ಗಟ್ಟಿಮುಟ್ಟಾದ ಆಳು. ಕೈಕಾಲು, ಅವಯವಗಳ ಕೊರತೆ ಅವನಿಗಿರಲಿಲ್ಲ. ಆದುದರಿಂದ ಅವನು ದುಡಿದಿದ್ದಾನೆ. ದುಡಿದು ಅನ್ಯರನ್ನು ಕೇಳದೆ ಬೇಡದೆ ಸುಖಗೊಂಡಿ ದ್ದಾನೆ. ಅನ್ಯರಾಸರಿಗೆ ಹೆಚ್ಚು ಕಾದಿಲ್ಲ. ಅವನು ತನ್ನ ಧನಿಗಾಗಿ ದುಡಿದ ಜೀವಿ. ಅವನ ಧನಿ ದೊಡ್ಡ ಧನಕುಬೇರ. ಹಿರಿಯ ಭೂಮಾಲೀಕ. ಹಣದ ಗರ್ವ, ಭೂಮಿಯ ಔದ್ಧತ್ಯ ಇವೆರಡು ಅವನ ಧನಿಯನ್ನು ಕೆಡಿಸಿ ದ್ದುವು. ಕೆಡಿಸಿ ದುರಾಚಾರಕ್ಕೆ ತಳ್ಳಿದ್ದುವು. ಹಿಂದೆ ಕೊಗ್ಗ ಇಂತಹ ತನ್ನ ಧನಿಯಲ್ಲಿ ದುಡಿಯುತ್ತಿದ್ದಾಗ ಡೊಂಬಿಯೊಂದು ನಡೆಯಿತು. ಡೊಂಬಿಗೆ ಧನಿಕರು ಕಾರಣರು. ಅದರಲ್ಲಿ ಪ್ರಾಣಬಲಿಗೆ ತುತ್ತಾಗುವವರು ಸೇವಕರು. ಇಂತಹ ನೆಲೆ ಧನಿಗಳದು. ಧನಿಯ ಸೇವೆಯಲ್ಲಿದ್ದ ಕೊಗ್ಗನು ಕಾಲುಡಿಸಿ ಗೊಂಡುದು ಡೊಂಬಿಯಲ್ಲಿ. ಡೊಂಬಿ ಯಜಮಾನನದ್ದು. ಅದರಿಂದುಂ ಟಾಗುವ ಹಾನಿಗೆ ಪಾಲು ಕೆಲಸಗಾರರದ್ದು. ಇಂತಹ ನೆಲೆ ನಮ್ಮ ಬಡವ ರಿಗೆ ಮತ್ತು ಕೆಲಸಗಾರರಿಗೆ. ಹಿಂದೆ ಡೊಂಬಿಯಲ್ಲಿ ಕಾಲುಡಿದ ಕೊಗ್ಗ, ಧನಿಯಿಂದ ಅಲ್ಪ ಹಣ ಆಸ್ಪತ್ರೆಯಲ್ಲಿರುವಾಗ ಹೊಂದಿದ್ದಾನೆ. ಧನಿ ಆಸ್ಪತ್ರೆಯಿಂದ ಹೊರಬಂದ ನಂತರ ಅವನಿಗೆ ಹೆಚ್ಚು ಸಹಾಯಿಸಲಿಲ್ಲ. ಏನೋ ಅಲ್ಪ ಸ್ವಲ್ಪ ಕೊಡುತ್ತಿದ್ದ. ಬಡವರು ಧನಿಕರಿಗಾಗಿ ಕೈಕಾಲು ಡಿಸಿಕೊಳ್ಳಬೇಕು. ಮುಂದೆ ವಿಪತ್ತನ್ನುಣ್ಣಬೇಕು. ವಿಪತ್ತಿಗೆ ಸಹಭಾಗಿ ಗಳು ಸಿರಿವಂತರಲ್ಲ. ಬಾಳಿನಲ್ಲಿ ಪಾಲುಗಾಣುವ ಬುದ್ಧಿ ದೇವರಿಂದ ಅವ ರಿಗೆ ತಿಳಿದಿಲ್ಲ. ದೇವರು ದುರ್ಬಲರನ್ನು ಪೀಡಿಸುವ; ಕೊಲ್ಲುವ.

ಕೊಗ್ಗನು ಇಂತಹ ಪ್ರಸಂಗವನ್ನು ಹೊಂದಿ ಎರಡು ವರ್ಷಗಳಾದುವು. ಯೌವನದ ಹರಯ ಅವನಲ್ಲಿದೆ. ಹಾಗಿದ್ದರೂ ಹೊಟ್ಟೆಯ ಹಸಿವೆಗೆ ಬೇಡುವ. ಕಾಲುಡಿದಾತ ಬೇಡ ಹೋಗುವಾಗ ಕುಂಟುತ್ತಾ ಹೋಗುವ. ಕುಂಟುವುದನ್ನು ಕಾಣಲು ಹಲವರು ನಿಲ್ಲುವರು. ಮತ್ತೆ ಕೆಲವರು ಹೀಯಾಳಿಸುವರು. ಒಂದು ಬೀದಿಯಿಂದ ಮತ್ತೊಂದು ಬೀದಿಗೆ ಸೇರಲು ಅವನಿಗೆ ಕಾಲುಡಿದುದರಿಂದ ಬಹಳ ಹೊತ್ತು. ಕಾಲು ಸರಿಯಿರದಾತ ಬೇರೂರಿಗೆ ಹೋಗ. ಹೋಗುವುದಾದರೂ ಎಂತು? ನಮ್ಮ ನಗರದ ಮಂದಿಗೆ ಅವನು ತಿರುಪೆಯೆತ್ತಲು ಅವನು ಬೇರೆ ಕಡೆಗೆ ಹೋಗದುದರಿಂದ ತುಂಬಾ ಪರಿಚಿತ. ನಮ್ಮ ನಗರ ದೊಡ್ಡದಲ್ಲ. ಕಿರಿದು. ಅದಕ್ಕೆ ನಾಲ್ಕಾರು ಬೀದಿ. ವಾರಕ್ಕೊಮ್ಮೆ ಒಂದೊಂದು ಬೀದಿಗೆ ಬರುವ. ಇದರಿಂದ ನಗರದ ಪ್ರತಿ ಮನೆಯವರಿಗೂ ಅವನರಿವು ಇದ್ದೇ ಇದೆ. ಧನಿಯ ಮನೆ ನಗರದಿಂದ ಹೊರಗಿಲ್ಲ. ಧನಿ ಕಾಲುಡಿಸಿ ಸೊಗಗೊಳ್ಳುವ ತನಕ ಕೊಟ್ಟ ಸಹಾಯ ನಿನಗೆ ದೊಡ್ಡದೆಂಬ ತನಕ ಬಿಕ್ಕೆಗೆ ಹೊರಟಿಲ್ಲ. ಬೀದಿ ಬೀದಿ ಬಿಕ್ಕೆ ಬಿತ್ತುನ ಹೆಳವ ಬೇರೂರಿಗೆ ಹೋಗದೆ ಯುದ್ಧಕಾಲದ ಇಂದು ಕಠಿಣ ನೆಲೆಗೆ ಮುಟ್ಟಿದ. ಹಸುಗೆ ಪದ್ಧತಿ ನಾಡಲ್ಲಿ ಬಂತು. ಎಲ್ಲರಿಗೂ ಹಸುಗೆಯ ಚೀಟು. ಹಸುಗೆಯ ಚೀಟಿರದ ಮಂದಿಗಶನವಿಲ್ಲ. ಮನೆಯುಳ್ಳವಗೆ ಹಸುಗೆಯ ಚೀಟು. ಭಿಕಾರಿಗಳಿಗೆ ಮನೆಯೆಲ್ಲಿ? ಹಸುಗೆಯ ಚೀಟೆಲ್ಲಿ?

ಕೊಗ್ಗನು ಇಂದು ಬೇಡ ಹೋದರೆ ಅಕ್ಕಿ ನೀಡುವವರಿಲ್ಲ. ಅವನನ್ನು ಕಂಡರೆ ಬೇರೂರಿಗೆ ಹೋಗೆನ್ನುವರು. ಪ್ರತಿ ಮನೆಯವರೂ ನಿನಗೆ ಬೇಡಲು ಬೇರೂರಿಲ್ಲವೇ ಎನ್ನುವರು. ಪಾಪ! ನಡೆಯೆ ಕುಂಟು ಬೀಳುವ ಆತನಿಲ್ಲಿಗೆ ಆವ ಊರಿಗೆ ತೆರಳುವ? ಎಲ್ಲಾ ಮನೆಯಿಂದಲೂ ಒಂದೇ ಸ್ವರ. ಕೊಗ್ಗನೊಡನೆ ಕೆಲವರು ಏನೋ: ಬೇಡುವುದು ಜನತೆಗೆ ವೃತ್ತಿಯಾಗಿ ಬಿಟ್ಟಿದೆ; ಈ ಜೀವಿಗಳಿಗೊಂದು ಜೀವಿಕೆಯ ಮಾರ್ಗ ಭಿಕ್ಷಾವೃತ್ತಿಯೆಂದು ಹಳಿಯುವರು. ಅವ ಅದನ್ನು ಕೇಳುವ, ಮಾತೆತ್ತಲಾರ. ತಿರುಗಿ ನುಡಿಯ. ಕೆಲವೆಡೆ ಅವನನ್ನು ಕಂಡಾಗ ಬಾಗಿಲ ಗೇಟ ಕೀಲಿ ಹಾಕುವರು. ಮಕ್ಕಳಿಗೆ ಅವನನ್ನು ಕಂಡಾಗ ಮತ್ತೊಂದು ಗೇಲಿ. ಮಕ್ಕಳಿಗೆ

ಬಡವನ ಪಾಡೇನು ಗೊತ್ತು? ನಾಯಿಯನ್ನು ಹಾರಿಸಲು ಹಿರಿಯರು ಸಹಾಯಗೊಡುವರು. ಕಿರಿಯರು ಅದನ್ನು ಕಂಡು ಸಂತಸಗೊಳ್ಳುವರು. ಆವುದು ಸಂತಸ? ಆವುದು ದುಃಖವೆಂಬ ತಿಳಿವು ಮಕ್ಕಳಿಗರಿಯದು. ಒಮ್ಮೆ ದುಃಖ ಬಂದಾಗ ಅಳುವವು. ಇನ್ನೊಬ್ಬರಿಗಾದಾಗ ನಗುವವು. ಮಕ್ಕಳ ಚೇಷ್ಟೆ ಮರ್ಕಟ ಚೇಷ್ಟೆ. ಇದರಿಂದ ಕೊಗ್ಗ ನೊಂದಿರುವ. ಬೇನೆಯುಂಡಿರುವ.

ಕೊಗ್ಗ ನಿನ್ನೆ ದಿನ ಒಪ್ಪೊತ್ತು ಅರೆ ಹೊಟ್ಟೆಯುಂಡಿರುವ. ಇಂದು ಬೆಳಗ್ಗೆ ಎದ್ದು ಮನೆ ಮನೆ ಹೋಗುವ. ಹಸುಗೆ ಪದ್ಧತಿ ಬಂದಿದೆ. ಅಕ್ಕಿ ನಮಗೆ ಸಾಕಷ್ಟಿರದೆ ನಿನಗೇನು ಕೊಡುವುದು? ಸಿಕ್ಕಿದ ಅಕ್ಕಿಯಲ್ಲಿ ಕಲ್ಲು. ವ್ಯಾಪಾರಿಗಳು ಒಂದು ಮುಡಿ ಅಕ್ಕಿಗೆ ಎರಡು ಸೇರು ಕಲ್ಲಾದರೂ ಸೇರಿಸ ದಿಲ್ಲ. ಆ ಮೇಲೆ ಅಳತೆ ಸೇರಿನ ಹಿಂದೆ ಪೆಟ್ಟು ಹೊಡೆಯದಿಲ್ಲ. ಇದ ರಿಂದ ಸಿಕ್ಕುವ ಅಕ್ಕಿ ತೀರಾ ಕಡಮೆ. ನಿನಗುಣಿಸುವುದೇ? ನಾವುಣು ವುದೇ? ಏನೀಯಲಿ? ನೀ ನಡೆ. ಎದುರಿರಬೇಡವೆಂಬ ಮಾತೇ ಅವನಿಗೆ ಕೇಳಬರುತ್ತಿದೆ. ಬಡವನೇನು ಮಾಡುವ. ಮಳೆ ಅಲ್ಪ ಕಡಮೆ; ಬಿಸಿ ಲಿದೆ. ಮಧ್ಯಾಹ್ನ ಎರಡು ಗಂಟೆಯ ತನಕವೂ ಬೀದಿ ಬೀದಿ ಸುತ್ತಿದ ಅವನ ಜೋಳಿಗೆಗೆ ಒಂದು ಹಿಡಿ ಅಕ್ಕಿ ಹಾಕಿದವರಿಲ್ಲ. ನಡೆದು ಸಾಕಾದ. ಕೊನೆಗೆ ತನ್ನ ಧನಿಯಲ್ಲಿಗೆ ಹೋಗುವ. ಒಂದು ಹಿಡಿಯನ್ನವುಣ್ಣುವೆಯೆಂದೆ ಣಿಸಿದ. ಧನಿಯ ಮನೆ ತಾನಿರುವಲ್ಲಿಂದ ಒಂದೆರಡು ಮೈಲು ದೂರ. ಆದರೂ ಹಸಿವೆ ಕೇಳದು. ಬಿಸಿಲು ಅವನಿಗೆ ನಾಟದು. ಕೂಡಲೇ ನಿರ್ಧಾರ ಮಾಡಿ ಧನಿಯಲ್ಲಿಗೆ ಹೊರನಂಟ. ಕಾಲು ಕುಂಟಿದ. ಒಡಲೊ ಳಗೆ ಹಸಿವ ಬೆಂಕಿ. ಹೊರಗೆ ಬೆಂಗದಿರನ ಬಿಸುಪು. ಇದರಿಂದ ದೇಹ ಬಳಲಿ ಬೆಂಡಾಗಿದೆ. ಧನಿಯ ಮನೆಯ ಹಾದಿ ಹಿಡಿದಿರುವ. ಕಾಲೊಯ್ಯುವ, ಕುಂಟುವ. ಬೆವರು ನೀರಿಳಿದರೂ ಹಸಿವ ಬೆಂಕಿ ಹೊತ್ತುತ್ತಿದೆ. ಆ ಬೆಂಕಿ ಅವನನ್ನು ಓಡುವಂತೆ, ಸಾಗುವಂತೆ ಮಾಡುತ್ತಿದೆ.

ಅವೋ ಸೂರ್ಯನು ಕಂತಲು ಎರಡು ಗಳಿಗೆಯುಳಿದಿದೆ. ಧನಿಯ ಮನೆ ಮುಂದೆ ಬಂದೆತ್ತಿದ. ಮಾರ್ಗದ ಧೂಳು ಮೈಗೆ ಸವರಿದೆ. ವಿಕಾರ ರೂಪುಗೊಂಡಿದೆ. ಮೈಕೂದಲು ದಪ್ಪಗಟ್ಟಿದೆ. ತಲೆಗೂದಲು ಮಣ್ಣಿಡಿ ದಿದೆ. ಕೆಂಪುಗೊಂಡಿದೆ. ಅದೊಂದು ಅವನ ರೂಪ ಎಂತಾಗಿತ್ತು!!....

ಮನೆ ಬಾಗಲಿಗೆ ಬಂದ ಕೊಗ್ಗನನ್ನು ಧನಿ ಕಂಡ. ಕಂಡವ ನೋಡ ಲಿಲ್ಲ. ನೋಡಿಯೂ ನೋಡದಂತಿದ್ದ. ಕೊಗ್ಗ "ಅಯ್ಯಾ! ನಿನ್ನೆಯಿಂದ ಉಂಡಿಲ್ಲ. ಒಂದು ಹಿಡಿಯುಣಿಸು ಬಡಿಸುವಂತೆ ಮಾಡಿರಿ" ಎಂದು ಬೇಡಿದ. ಧನಿಗೆ ಆ ಸದ್ದು ಕೇಳಿಸಲೇ ಇಲ್ಲ. ಧನಿಯ ಕಿವಿಗೆ ಕೇಳಿ ಸುವ ಸದ್ದು ನಾಣ್ಯದ್ದು. ಸಾಲದ್ದು. ಇದರಿಂದ ಬೇರಾವುದು? ಇಂತಹ ಕಿವಿ ಕೊಗ್ಗನ ಧನಿಯದು. ಮತ್ತೊಮ್ಮೆ ಕೊಗ್ಗ ಕೇಳಿದ. ಅವನ ಕುತ್ತಿಗೆ ಒಣಗಿದೆ. ಬೆಳಗಿನಿಂದ ಈ ವರೆಗೆ ನೀರೂ ಅವನಿಗಿಲ್ಲ. ಗಟ್ಟಿ ಕೂಗಿ ಕೇಳಲರಿಯ. ಅಶಕ್ತನಿರುವ. ಆದರೂ ಒಂದು ಬಗೆಯಿಂದ ಚೀರಿ ಮತ್ತೊಮ್ಮೆ ಅಯ್ಯಾ ಒಂದು ಹಿಡಿ ಅನ್ನ ಬಡಿಸುವಂತೆ ಮಾಡಿರೆಂದ. ಏನೋ ಧನಿಯು ಕಿವಿಗೆ ಕೇಳಿಸಿತು. ಹೇಳಹತ್ತಿದ. ಹೊತ್ತಲ್ಲದ ಹೊತ್ತು. ಹಸುಗೆ ಕ್ರಮ ಬಂದಿದೆ. ನಿನಗೆ ಬೇಯಿಸಿಟ್ಟಿಲ್ಲ. ನಮ್ಮದೇ ಕಠಿಣ ನಲೆ. ಅದರೆಡೆ ಬಂದವರಿಗೆ ಹೋದವರಿಗೆಲ್ಲಾ ಆಗಬೇಕು. ಅನ್ನವೆಲ್ಲಿ........ ನಡೆ. ಅನ್ನವೆಂದು ಎಂದೂ ಕೇಳಬೇಡ. ಹಿಂದೆ ತೆತ್ತಿರುವೆಯೆಂದ.

ಕೊಗ್ಗನು ಧನಿ ತನ್ನನ್ನು ನೆನೆದು ಅನ್ನ ಕೊಡಬಹುದೆಂದೆಣಿಸಿದ್ದ. ಆದರೆ ಅವನ ಆ ಎಣಿಕೆ ತಪ್ಪಾಯಿತು. ಧನಿ ಕೊನೆಗೆ ಹೋಗೆಂದ. ಅವನು ಮುಂದೆ ನಿಲ್ಲಲೆಳಸಲಿಲ್ಲ. ಹೊತ್ತು ಮುಳುಗುವ ಹೊತ್ತು. ಅವನು ಸಂಜೆಯೆಲ್ಲಾಯಿತೋ ಅಲ್ಲಿ ಬಳಿಯ ಹಟ್ಟಿ, ಕೊಟ್ಟಿಗೆಗಳಲ್ಲಿ, ಬಪ್ಪಣೆ ಗಳಲ್ಲಿ ಮಲಗುತಿದ್ದವ. ಇಂದು ಅವನಿಗೆ ಹಸಿವೆಯೊಂದೇ ಗೊತ್ತು.

ಧನಿಯಲ್ಲಿಂದ ಹೊರಟು. ಬರುವಾಗ ದಾರಿ ಬಳಿ ಒಂದೆರಡು ಕೋಳಿ ಮರಿಗಳನ್ನು ಕಂಡ. ಹಸಿಯುತಿದ್ದ ಆತಗೆ ಅದನ್ನು ಕೊಂದು ಬೇಯಿಸಿ ತಿಂಬ ಆಸೆ ಮನದೋರಿತು. ಕೂಡಲೇ ಕೈಯಲ್ಲಿದ್ದ ದಂಟಿನಿಂದ ಕೋಳಿ ಮರಿಯೊಂದಕ್ಕೆ ಹೊಡೆಯ ಹತ್ತಿದ. ಅಷ್ಟರಲ್ಲಿ ಕೋಳಿಮರಿ ಕೂಗ ಹತ್ತಿತು. ಕೋಳಿಯ ಕೂಗು ಕೇಳಿದುದೇ ತಡ. ಬಳಿಯ ಹಿತ್ತಲ ಮನೆ ಯಾಳು ಓಡಿ ಬಂದ. ನೋಡುವುದೇನು....ಕೊಗ್ಗನನ್ನು ಕಂಡ. ಕೊಗ್ಗ ಕೋಳಿಮರಿಗಳನ್ನು ಹೊಡೆಯುತ್ತಿರುವನೆಂದು ಕೂಗಿದ. ಮನೆಯೊಳಗಿಂದ ಕೂಗು ಕೇಳುತ್ತಲೇ ಕೊಗ್ಗನಿದ್ದಲ್ಲಿಗೆ ಧಾವಿಸಿ ಬಂದರು. ಕೂಡಲೇ ಕೋಳಿಯ ಯಜಮಾನ ನೋಡುವುದೇನು? ಇವನಿಗೆ ಎರಡು ಹೊಡೆ

ಯೆಂದು ತನ್ನಾಳಿಗೆ ನೇಮಿಸಿದ. ಹೇಳತೊಡಗಿದ, "ಬೇಡುವ ನೆವ. ವೇಷ ಒಂದು ಹಾಕಿ ಇನ್ನೊಂದು ನಾಡುವುದು ಬೇಡುವವರೆಲ್ಲಾ ಅದೊಂದು ವೇಷದ ಕಳ್ಳರು. ಡಕಾಯಿತರು. ಇಂತಹರಿಂದ ಊರು ಹಾಳಾಯಿತು. .... ...." ನುಡಿದು ಪೋಲಿಸ್ ಸ್ಟೇಷನಿಗೆ ರಿಪೋರ್ಟು ಕೊಟ್ಟ.

ಅರ್ಧ ತಾಸಿನಲ್ಲಿ ಲಾಟಿ ಹಿಡಿದು ಪೋಲೀಸರಿಬ್ಬರು ಬಂದರು. ಈ ಆಳುಗಳನ್ನೇನು ಹೇಳಲಿ? ಯಮನ ಕಿಂಕರರು ಇವರಿಗಿಂತ ಮೇಲು. ಅವರಿಗಿಂತ ಕಠಿಣರಾದ ಅವರು ಕೊಗ್ಗನನ್ನು ಕಂಡುದೇ ತಡ, ಸಿಟ್ಟಿನಿಂದ ರೇಗಿದರು. ಲಾಟಿಯಿಂದ ಬೆನ್ನಿಗೇಟು ಕೊಟ್ಟರು. ಕೊಗ್ಗನು ಏನು ನುಡಿಯಲಿ. ಅವನಿಗೆ ಹಸಿವ ವೇದನೆ, ಪೆಟ್ಟಿನ ವೇದನೆ, ನಡೆದ ದಣಿವು, ನೀರಡಿಕೆ ಎಲ್ಲಾ ಕೂಡಿವೆ. ಮೈ, ಕೈ, ಬಾಯಿ, ಕಣ್ಣುಗಳೆಲ್ಲಾ ಸೋತಿವೆ. ಕಣ್ಣೀರಿಡಿವ ಬೆನ್ನಿಗೆ ತೀವ್ರವಾದ ಪೆಟ್ಟೇರುತ್ತಿದೆ. ಏನು ನುಡಿವ ಎಲ್ಲರೂ ಮಿಣಿ ಮಿಣಿ ನೋಡುವರು ಭಾರತದ ನಿರ್ಭಾಗ್ಯ ವ್ಯಕ್ತಿ ಎಲ್ಲರ ಮುಂದಿರುವ. ಪೋಲೀಸರ ಪೆಟ್ಟಾಗಿ ನೆತ್ತರೊಡೆದು ಕಾಣುವ ನೆತ್ತರಿನ ಸುರಿಯು ನ್ನೊರಸುವವರಿಲ್ಲ. ಒಮ್ಮೆ ಬಿದ್ದ, ಎದ್ದ ಹಾಗೆ ಬಿಡುವರೇ ಪೋಲೀಸರು. ಪೋಲೀಸರು ಸ್ಟೇಶನಿಗೆ ಹೊರಡೆಂದರು. ಕೈದು ಮಾಡಿದರು. ಬಡ ವ್ಯಕ್ತಿಯಲ್ಲವೇ. ಇವರು ನಿಷ್ಕರುಣಿಗಳೇಕೊ? ಗಾಡಿಯಿಂದ ಧನಿಕನು ಕೈದುಗಾರನಾಗಿಯೂ ಹೋಗುವ. ಅಂತೆಯೇ ಒಯ್ಯುವರು. ಇವನನ್ನು ಪೋಲೀಸರು ಹೊರಡಲೆಂದರು. ಅವನ ನೆಲೆ ಅವರಿಗೇನು ಗೊತ್ತು? ಅವರಾದರೂ ಕಾಣುವುದಾರನ್ನು!!

ಹಲವು ವಿಧದಿಂದ ನೊಂದ ಆತ ಮಾತೆತ್ತದೆ ಪೋಲೀಸರ ಹಿಂದೆ ಹೊರಟ. ನಡೆವುದು ಹೇಗೆ? ಹಸಿವೆ, ಬೇನೆ, ಆಯಾಸಗಳು ಅವನನ್ನು ನೋಯಿಸುತ್ತಿವೆ. ಅದಕ್ಕೆ ಅವನು ಬಾಗವೆ ಮುಂದೊತ್ತಿದ ಪೋಲೀಸರಾದರೂ ಅವನನ್ನು ಗಬ್ಬರಿಸದುಳಿಯುಲಿಲ್ಲ. ಹತ್ತು ಗಂಟೆ ರಾತ್ರಿ ಹೊತ್ತು. ಪೋಲೀಸ್ ಸ್ಟೇಶನಿಗೆ ಮುಟ್ಟಿದ. ಆ ಕೈದಿಗೆ ಮುಂದೆ ಆಹಾರವೆಲ್ಲಿ?....

ಒಳಗೆ ಕಾಳ ಕೊಠಡಿಗೆ ಹೋಗ ಹೇಳಿದರು. ಅದು ಕತ್ತಲೆ. ಚಿಮಿಣಿ ಎಣ್ಣೆಗೂ ಚೀಟಿಲ್ಲವೇ ಇಂದು. ಅವನು ಮೆಲ್ಲನೆ ಕೋಣೆಯೊಳಕ್ಕೆ ಹೋದ.

ಆ ಕೋಣೆ ಎಂತಿತ್ತು! ಯಾರು ಬಲ್ಲರು! ಪೋಲೀಸರು ಅವನನ್ನು ಅದ ರೊಳಕ್ಕೆ ತಳ್ಳಿದರು. ಬೀಗಮುದ್ರೆಯಾಯಿತು.

ಪಾಪ! ಅವನ ನೆಲೆಯೇನೆನ್ನಲಿ............ಎಲ್ಲವೂ ಅತ್ಯಾಚಾರ. ರಾತ್ರಿ ಪೂರ್ಣವಾಗಿಲ್ಲ. ನಡುರಾತ್ರಿ ಹಸಿವು, ಬಾಯಾರಿಕೆ, ಬೇನೆಗಳಿಂದ ತೊಳಲಿ ಮೃತನಾದ.

ಮಾರಣೆ ದಿನ ಗಂಟೆಯ ನಿಯಮದಂತೆ ಪೋಲೀಸರು ಬಾಗಿಲು ತೆಗೆ ಯಲು ಕಾಣುತಿತ್ತು ಹೆಣ. ಇಂತಾದ ಕೊಗ್ಗ!

**ಪ್ರಭಾತ 11-9-1944**

# ಸುಶೀಲನ ಪೂಜೆ!



ಸುಶೀಲನು ಇಂದು ಪದವೀಧರನಾಗಿದ್ದಾನೆ. ಅವನು ಮೊದಲಿನ ಹೆಸರು ಸುಶೀಲನೆಂದಲ್ಲ. ಇದು ಅವನಾಗಿ ಇಟ್ಟ ನಾಮಕರಣ. ಅವನ ಅಪ್ಪನು ಭವಾನೀ ಶಂಕರನೆಂದು ಹೆಸರಿಟ್ಟಿದ್ದನು. ಆದರೆ ಭವಾನೀ ಶಂಕರ ಎಂಬ ಹೆಸರಿನಲ್ಲಿ ಅವನಿಗೇನೂ ತೃಪ್ತಿ ಇಲ್ಲ. ಅವನೂ ಹಿಂದು ವಾದರೂ ತನ್ನ ಮತದಲ್ಲಿ ಕಿಂಚಿತ್ತಾದರೂ ಅಭಿಮಾನವಿಲ್ಲ. ಕೃಷ್ಣ, ಶಂಕರ, ನಾರಾಯಣ, ಗೋಪಾಲ, ಪಾಂಡುರಂಗ, ಗಣೇಶ, ಶಿವ, ಪಾರ್ವತಿ, ಲಕ್ಷ್ಮಿ, ದುರ್ಗಾ, ಸರಸ್ವತಿ, ಎಂಬ ಹೆಸರುಗಳನ್ನು ಕೇಳಿ ದರೆ ಈ ದೇವತೆಗಳೆಷ್ಟು ಎಂದು ಜುಗುಪ್ಸೆಯುಂಟಾಗುತಿತ್ತು. ದೇವ ತಾರ್ಚನೆ ಮಾಡುವುದು, ದೇವಾಲಯಕ್ಕೆ ಹೋಗುವುದು, ದೇವತೆಗಳಿಗೆ ನಮಸ್ಕರಿಸುವುದು, ದೇವತಾ ಪ್ರಸಾದವನ್ನು ತೆಕ್ಕೊಳ್ಳುವುದು ಎಂದರೆ ಅದೊಂದು ಸಮಯವನ್ನು ನಿರರ್ಥಕವಾಗಿ ಕಳೆಯುವುದು ಎಂದೆನಿಸು ತಿತ್ತು. ಅವನೀಗ ಕೇವಲ ನಾಸ್ತಿಕರ ಮತವನ್ನು ಸೇರಿದ್ದಾನೆ. ದೇವತೆ ಗಳಿಗೆ ನಾವೇಕೆ ಕೊಡಬೇಕು? ದೇವರಿಗೆ ನಾವು ಕೊಡಬೇಕೇ? ಕಲ್ಲಿನ ಮೂರ್ತಿಯಲ್ಲಿ ಈ ಭಾವನೆಯೇ? ಬಿಂಬಾರಾಧನೆಯೆಂದರೇನು? ದೇವಾ ಲಯಕ್ಕಾಗಿ ಹಾಳುಮಾಡುವ ಸ್ಥಳಗಳನ್ನು ಇನ್ನಿತರ ವ್ಯಾಪಾರಾದಿಗಳ ಅಂಗಡಿಗಾಗಿ ಉಪಯೋಗಿಸಬಹುದು. ದೇವರಿಗೆ ಹರಕೆಯಂತೆ! ಏನು ಲಂಚ ಕೊಡುವುದೋ? ಇನ್ನೊಬ್ಬನಿಗೆ ಉಪದ್ರವವನ್ನು ಕೊಡಲು ದೇವ ರಂತೆ, ಇದೆಂತಹ ಮಾರಿಯೋ? ಅದೃಷ್ಟವಶದಿಂದ ಈ ಕಷ್ಟಪರಂಪರೆ ಗಳು ನಮಗುಂಟಾಗುತ್ತವೆ. ದೇವರು ನಮಗೇನೂ ಸಹಾಯ ಗೈಯುವು ದಿಲ್ಲ. ದೇವರೇ ಇಲ್ಲ. ದೇವರಿದ್ದರೆ ದೇವರ ಮಕ್ಕಳು ನಾವಲ್ಲವೆ? ಮಕ್ಕಳು ಕಷ್ಟಪರಂಪರೆಗಳಿಗೆ ಬಿದ್ದಾಗ ತಾಯಿ ತಂದೆಗಳಿಗೆ ದುಃಖವು ಉಂಟಾಗುವುದಿಲ್ಲವೇ? ಆದ್ದರಿಂದ ದೇವರು ಒಬ್ಬನಿಗೆ ಒಳ್ಳೇದು ಮಾಡು ವುದು ಇನ್ನೊಬ್ಬನಿಗೆ ಕೆಟ್ಟದ್ದು ಮಾಡುವುದು ಎಂದು ಹೇಳುವುದು ಯುಕ್ತಿಚಿಂತಾರಹಿತವಾದ್ದು. ದೇವರು ಇಲ್ಲವೇ ಇಲ್ಲ, ಎಂದು ಹೇಳಲು ಸುರು ಹಚ್ಚಿದ್ದಾನೆ. ಈ ಕಾರಣ, ಭವಾನಿ ಎಂದರೆ ಪಾರ್ವತಿಯಂತೆ.

ಶಂಕರ ಅಂದರೆ ಶಿವನಂತೆ. ಈ ಹೆಸರು ನನಗೆ ಯುಕ್ತವಲ್ಲ. ಎಂದೆಣಿಸಿ ಸುಶೀಲನೆಂಬ ಹೆಸರನ್ನು ಇಟ್ಟುಕೊಂಡಿದ್ದಾನೆ. ಈಗ ಕತೆ, ಕವನ, ಕಾದಂಬರಿ ಉಪನ್ಯಾಸ ಇವುಗಳನ್ನೂ ಬರೆಯತೊಡಗಿದ್ದಾನೆ. ಅವುಗಳಲ್ಲೆಲ್ಲಾ ಸುಶೀಲನೆಂಬ ಹೆಸರನ್ನು ಹಾಕಿದ್ದಾನೆ. ಅವುಗಳೆಲ್ಲಾ ದೈನಂದಿನ, ಸಾಪ್ತಾಹಿಕ, ಮಾಸಿಕ, ತ್ರೈಮಾಸಿಕ, ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಸುಶೀಲನೆಂಬ ಹೆಸರು ಪತ್ರಿಕಾ ವಾಚಕರೆಲ್ಲರಿಗೂ ತಿಳಿದಿದೆ. ತಂದೆಗೆ ಈ ವಿಷಯವು ಇನ್ನೂ ತಿಳಿದಿಲ್ಲ. ಶಾಲೆಯ ಇನಸ ಮಿತ್ರರಿಗೆಲ್ಲಾ ಸುಶೀಲನೆಂಬ ಹೆಸರೇ ಗೊತ್ತಿದೆ. ಭವಾನೀ ಶಂಕರನೆಂಬ ಹೆಸರು ತಿಳಿದಿಲ್ಲ.

ತಂದೆಯಾದರೋ ವೈದಿಕ ಧರ್ಮವನ್ನಿನ್ನೂ ಬಿಟ್ಟಿಲ್ಲ. ಮನೆಯವರ ಎದುರಿಗೆ ಶುದ್ಧ ನೈಷ್ಠಿಕ ಪುರುಷನಂತೆ ಕಾಣಿಸಿಕೊಳ್ಳುತ್ತಾನೆ.

ಒಂದಾನೊಂದು ದಿನ ಭವಾನಿ ಶಂಕರನ ತಂದೆಯು ಪೇಟೆಗೆ ಹೋಗಿದ್ದನು. ಅಲ್ಲಿ ಅವನೂ ಅವನ ಗೆಳೆಯನಾದ ಚೋಮನೊಂದಿಗೆ ತಿರುಗುತ್ತಿದ್ದಾನೆ. ತಂದೆಯ ಕಣ್ಣು ಚೋಮನೊಂದಿಗೆ ಇರುವ ಮಗನನ್ನು ಕಂಡಿತು. ಪೇಟೆಯಾದ್ದರಿಂದ ತಂದೆ ಮಾತನಾಡಲಿಲ್ಲ. ಆದರೆ ಮನಸ್ಸು ಮಗನ ಮೇಲೆ ವಿಪರೀತ ಭಾವನೆಯನ್ನು ಮಾಡಿಸಿತು. ಸಿಟ್ಟೇರಿ ಕಣ್ಣುಗಳು ಕೆಂಪಾದವು. ಪೇಟೆಯಲ್ಲಿ ಒಂದೂ ಮಾತೆತ್ತಲಿಲ್ಲ. ಯಾವುದನ್ನೂ ಪೇಟೆಯಿಂದ ಕೊಂಡುಕೊಳ್ಳದೆ ಮನೆಗೆ ಹಿಂದಿರುಗಿದರು.

ಮೊಗಸಾಲೆಯಲ್ಲಿ ಸುಬ್ಬಮ್ಮನು ಪತಿಯ ಆಗಮನವನ್ನು ನಿರೀಕ್ಷಿಸುತ್ತಿದ್ದಾಳೆ. ದೂರದಲ್ಲಿ ಯಾವುದೊಂದೂ ಕೈಯಲ್ಲಿಲ್ಲದೆ ಬರೀ ಕೈಗಳಿಂದ ಬರುವ ಪತಿಯ ಆಗಮನವನ್ನು ಕಂಡಳು. ಗೃಹಕ್ಕೆ ಮುಟ್ಟಿದರು. ಸುಬ್ಬಮ್ಮನಿಗೆ ತನ್ನ ಪತಿಯಾದ ಸೋಮಶೇಖರಾಯರ ಮೊಗವು ಎಂದಿನಂತೆ ಕಾಣಿಸಲಿಲ್ಲ. ಸುಬ್ಬಮ್ಮನು ಮಾತೆತ್ತಲಿಲ್ಲ. ಪತಿಯ ಪಾದಗಳಿಗೆ ನೀರನ್ನು ಎರಚಿದಳು. ಸೋಮಶೇಖರಾಯರು ಪಾದಗಳನ್ನು ತೊಳೆದು ಆರಾಮ ಕುರ್ಚಿಯ ಮೇಲೆ ಬಿದ್ದರು. ಮಗನ ವಿಷಯವಾಗಿ ಸಿಟ್ಟು ಬರುತ್ತದೆ. ಸುಮ್ಮನೆ ಕುಳಿತಿರುವರು.

ಸುಶೀಲನು ಬಂದನು. ಸೋಮಶೇಖರಾಯರ ಕಣ್ಣು ಮೊದಲಿಗಿಂತ ಭೀಕರವಾಯಿತು. ಮಗನು ಜಗಲಿಯ ಮೆಟ್ಟಿಲಿಗೆ ಹತ್ತಿದ್ದೇ ತಡ.

ಆರಾಮು ಕುರ್ಚಿಯಿಂದ ಧಸಕ್ಕನೆ ಎದ್ದರು. ಸುಶೀಲನಿಗೆ ಎಂದಿನಂತೆ ತನ್ನ ತಂದೆಯ ಸ್ಥಿತಿಯು ಕಾಣಲಿಲ್ಲ. ಕೂಡಲೇ

ಸುಶೀಲ—ಅಪ್ಪಾ! ಏಕೆ ಇಷ್ಟು ನಿಮ್ಮ ವದನವು ಉರಿಯಾಗಿದೆ?

ಸೋಮಶೇ—ಏನು? ನನ್ನ ಮೋರೆಗೆ ಉರಿ ಬಿದ್ದಿದೆಯೇ? ನೀನೀಗ ಎಲ್ಲಿಂದ ಬಂದುದು? ಎಲ್ಲೆಲ್ಲಾ ಹೋಗಿದ್ದೆ?

ಸುಶೀಲ—ನಾನೀಗ ಪೇಟೆಗೆ ಹೋದೆ. ಅನಂತರ ಮೈದಾನಿನಲ್ಲಿ ಕ್ರಿಕೆಟ್ ಆಡುವುದನ್ನು ನೋಡಿದೆ.

ಸೋಮಶೇ—ಏನೆಂದೆ? ಪೇಟೆಗೆ ಹೋದೆಯೇ? ಇನ್ನಾರು ನಿನ್ನ ಸಂಗಡ ಇದ್ದರು? ಕ್ರಿಕೆಟಾಟದಲ್ಲಿ ಯಾರು ಗೆದ್ದರು? ಈ ಕುಟ್ಟಿದ್ದಾಣೆಯ ಬಡಿದಾಟವು ಕ್ರಿಕೇಟಂತೆ. ಹಳ್ಳಿಯ ಗೋಪಾಲಕರು ಈ ಆಟವನ್ನು ಆಡಿದರೆ ಕುಟ್ಟಿದ್ದಾಣೆಯಂತೆ. ಸಾಕು, ಈ ನೂತನ ಯುಗದ ಪರಿವರ್ತನೆ. ನಾಳೆ ಕೋಡಂಗಿ ವೇಷ ಹಾಕು. ಸೋಮಾರಿಯಾಗು. ಯಾರು ನಿನ್ನೊಡನೆ ಇದ್ದರು? ಬೇಗ ಹೇಳು.

ಸುಶೀಲ—ನೆರೆಮನೆಯ ರಾಮುನೂ ನಾನೂ ಇಬ್ಬರೂ ಒಂದಾಗಿ ಹೋಗಿದ್ದೆವು. ಮತ್ತಾರೂ ಇದ್ದಿಲ್ಲ.

ಸೋಮಶೇ—ನೆರೆಮನೆಯ ರಾಮು! ಯಾವ ರಾಮು, ಯಾವ ಕೋಮು, ಚೋಮುನಲ್ಲವೇ ನಿನ್ನೊಂದಿಗಿದ್ದುದು?

ಸುಶೀಲ - ಅಪ್ಪಾ, ಚೋಮುನು ಮಾರ್ಕೇಟಿಗೆ ಬಂದಿದ್ದ. ಮಾರ್ಕೇಟಿನಲ್ಲಿ ಜನಸಂದಣಿಯಲ್ಲವೇ? ಆದ್ದರಿಂದ ಅವನು ನನ್ನೊಂದಿಗೆ ನಿಮಗೆ ಕಂಡಿರಬಹುದು. ಅವನು ಮಾರ್ಕೇಟಿಗೆ ಬಂದವನು. ನನ್ನೊಂದಿಗಾಗಿರಬಹುದು. ಅದಕ್ಕೇಕೆ ಇಷ್ಟು ಕೋಪ!

ಸೋಮಶೇ—ಚೋಮುನು ಮಾರ್ಕೇಟಿಗೆ ಬಂದವನು ನಿನ್ನೊಂದಿಗಾದನೇ? ಇಬ್ಬರೂ ಒಂದಿಗಿದ್ದು ಸಂಭಾಷಣೆ ಮಾಡುತ್ತಿದ್ದು! ಏನೋ ಹಾಗೆ ಹೀಗೆ ನಿನ್ನೊಂದಿಗೆ ಸೇರಿದ್ದೇ? ಸುಳ್ಳನ್ನು ಆಡುವೆಯೇ? ನಿನ್ನ ನಾಲಿಗೆಯ ಚಾಪಲ್ಯವೇ! (ಇಷ್ಟರಲ್ಲೇ ಅಡಿಗೆ ಮನೆಯಲ್ಲಿದ್ದ ಸುಬ್ಬಮ್ಮನು ಈ ಗದ್ದಲವನ್ನು ಕೇಳಿ ಬಂದಳು.)

ಸುಬ್ಬಮ್ಮ—ಏನು! ಈ ಮಗುವಿಗೆ ಇಷ್ಟೊಂದು ಗದರಿಸುವಿರಿ. ಅವನೇನು ಅನ್ಯಾಯ ಮಾಡಿದನು? ಇಂದು ಮಧ್ಯಾಹ್ನಕ್ಕೆ ಉಪ್ಪು ಕಲ್ಲು ಊಟಕ್ಕೆ ಏನೊಂದೂ ತರಕಾರಿ ಸಾಮಾನುಗಳನ್ನು ತಂದಿಲ್ಲ. ನನ್ನ ಮಗುವು ಪಲ್ಯವಿಲ್ಲದೆ ಊಟ ಮಾಡಲಿಕ್ಕಿಲ್ಲ. ನನ್ನ ಮಗುವು ದಿನೇ ದಿನೇ ಕೆಲಸವಿಲ್ಲವೆಂದು ಕುಗ್ಗಿ ಬಾಡುತ್ತಿದೆ. ಈಗ ಇದು ಸಾಲದ್ದಕ್ಕೆ ಮಗುವಿನ ಮೇಲೆ ಬೆಂಕಿ ಹಾಕುವುದೇ?

ಸೋಮಶೇಖರ ರಾಯರು ರೇಗಿದರು. "ಛೇ! ಈ ದಿಟ್ಟೆ ಹೆಂಗಸು ನನ್ನ ಮೇಲೆ ಬೀಳುವಳು. ಅವಳ ಮಗನು ಮಾಡಿದ ದೋಷವು ಕಣ್ಣಿಗೆ ಬೀಳುವುದಿಲ್ಲ. ಇಂದೀಗ ಕುಟ್ಟಿದ್ವಾಣ ಹೊಡೆಯಲು ಹೋಗಿದ್ದಾನೆ. ಸಾಲದ್ದಕ್ಕೆ ಚೋಮನೊಂದಿಗೆ ತಿರುಗಾಡಲು ಸುರು ಹಚ್ಚಿದ್ದಾನೆ. ಅವನು ಹೀಗೆಲ್ಲಾ ಮಾಡಿದರೆ ನಿನಗೆ ಬಹಳ ಸಂತೋಷ! ನಿನ್ನ ಉಪದ್ರವಕ್ಕಾಗಿ ಎಂ. ಎ., ಪರೀಕ್ಷೆ ಪಾಸು ಮಾಡಿಸಿದ್ದೇನೆ. ಹತ್ತಾರು ಸಾವಿರ ರೂಪಾಯಿಗಳು ಈ ಪ್ರಾಣಿಗೆ ಬಲಿಯಾದುವು. ಇನ್ನೂ ನಾನೇ ಅನ್ನ ಕೊಡಬೇಕು. ಸಾಲದುದಕ್ಕೆ ಇದ್ದ ಚಾಂಡಾಲರೊಂದಿಗೆ ತಿರುಗಿ ಬಂದರೆ ವಿಚಾರಿಸ ಬಾರದು. ಜಾತಿಯಿಲ್ಲ, ಮತವಿಲ್ಲ, ಮೈಲಿಗೆಯಿಲ್ಲ, ಎಂಜಲಿಲ್ಲ. ಈ ಹಾಳು ಕತ್ತೆಗೆ ಮಗನ ದೋಷವು ತಿಳಿವುದೇ ಇಲ್ಲ, ಹೆಚ್ಚು ಮಾತಾಡಿದರೆ ಜೋರು!"

ಸುಶೀಲನು ಸುಮ್ಮಗಾದನು. ಸುಬ್ಬಮ್ಮ, "ಅಪ್ಪಾ, ಮಗುವೇ, ನೀನೇನು ಮಾಡಿದೆ?" ಎಂದು ಮಗನನ್ನು ಕೇಳಿದಳು.

ಸೋಮಶೇ—"ನಿನ್ನಿಂದಲೂ ನಿನ್ನ ಹಾಳು ಮಗನಿಂದಲೂ ನನ್ನ ಕುಲವೇ ಹಾಳಾಯಿತು. ಇದು ವರೆಗೆ ಅವನೊಬ್ಬನೆ ಮೈಲಿಗೆಯಾಗಿದ್ದ. ಈಗ ಇವಳೂ ಮೈಲಿಗೆಯಾದಳು. ನಾನು ಇನ್ನು ಈ ಮನೆಯಲ್ಲಿ ಈ ದಿಟ್ಟೆಯು ಮಾಡಿದ ಅನ್ನವನ್ನುಣ್ಣಬೇಕು. ಛೀ! ನನಗೆ ಇದು ಒಗ್ಗದು. ಈ ಹಾಳು ಮನೆಯೂ ಬೇಡ, ಸಂಸಾರವೂ ಬೇಡ. ಸುಬ್ಬೀ ಶಂಕರರೂ ನಿಮಗೇ ಈ ಹಾಳು ಮನೆಯಾಯಿತು. ನಾನಿನ್ನು ಇಲ್ಲಿ ನಿಲ್ಲಲಾರೆ. ಇದೋ ಹೋಗುವೆನು" ಎಂದು ಸೋಮಶೇಖರರಾಯರು ಹೊರಟರು. ಸುಬ್ಬಮ್ಮನು ಸುಮ್ಮನಿದ್ದಳು.

ಸುಶೀಲನು ತಂದೆಯನ್ನು ಹಿಡಿದು, "ಅಪ್ಪಾ, ಹೋಗಬೇಡ!" ಎಂದು ಬೇಡಿದನು. ಸೋಮಶೇಖರರಾಯರು ಪುನಃ ಆರಾಮ ಕುರ್ಚಿಯ ಮೇಲೆ ಬಿದ್ದರು. ಅನಂತರ ಸೋಮಶೇಖರನು—ಇಂದು ಅಡಿಗೆಯಾಗ ಬೇಕಾದರೆ ಉಣ್ಣಬೇಕಾದರೆ ಎಲ್ಲರೂ ಮಿಂದು ಪಂಚಗವ್ಯ ಸೇವನೆಯಾಗ ಬೇಕು ಎಂದು ಅಪ್ಪಣೆಯನ್ನು ಮಾಡಿದರು.

ಇಂದಿನ ಮಧ್ಯಾಹ್ನದ ಅವಸ್ಥೆಯಾಯಿತು. ಸೋಮಶೇಖರರಾಯರ ಕಟ್ಟಾಜ್ಞತಿಯಂತೆ ಎಲ್ಲಾ ನಡೆದುವು—ಇಂದೀಗ ಸಾಯಂಕಾಲ ನಾಲ್ಕೂ ವರೆ ಗಂಟೆ ಸಮಯ. ಸುಶೀಲನು ಸಮುದ್ರದ ಒಳಗೆ ಹೋದನು. ಅಲ್ಲಿಗೆ ಚೋಮನು ಸಾಯಂಕಾಲ ಬರುವನೆಂದಿದ್ದನು. ಏನೋ ಬರ ಲಿಲ್ಲ. ಸ್ವಲ್ಪ ಹೊತ್ತು ತೀರದಲ್ಲಿ ಕುಳಿತನು. ಅಷ್ಟರಲ್ಲೇ ಹದಿನೆಂಟು ವಯಸ್ಸಿನ ಓರ್ವ ಸುಂದರಿಯು ಮಂದವಾದ ನಡಿಗೆಯಿಂದ ಬಂದುದು ಕಂಡಿತು. ಅವಳ ರೂಪಲಾವಣ್ಯವನ್ನು ನಾವೇಕೆ ವಿಸ್ತರಿಸಬೇಕು? ಪರ ಕಳತ್ರ ವರ್ಣನೆಯು ಎಂದೂ ಸಲ್ಲದು. ಸುಶೀಲನು ದೂರದಿಂದ ಬರುವ ಈ ನವಯುವತಿಯನ್ನು ಕಂಡನು. ಸುಶೀಲನೇನು ಅಲ್ಪ ವಯಸ್ಸಿನ ಹುಡುಗನಲ್ಲ, ಇಪ್ಪತ್ತೇಳು ವರ್ಷಗಳಾಗಿವೆ. ಈ ಆಯುಸ್ಕಾಂತವನ್ನು ಕಂಡೊಡನೆ ಸುಶೀಲನ ಕಬ್ಬಿಣದ ಮನಸ್ಸು ಅವಳಲ್ಲಿಗೆ ಹೋಯಿತು. ಆದರೆ ಅವಳೊಡನೆ ಉಪಚಾರದ ಮಾತನ್ನು ಹೇಳಲಾಗಲಿಲ್ಲ.

ಇನ್ನೀಗ ಸುಶೀಲನು ದಿನಂಪ್ರತಿ ಸಾಯಂಕಾಲ ಇವಳ ಸೌಂದ ರ್ಯಕ್ಕೆ ಮರುಳಾಗಿ ಡಕ್ಕೆಗೆ ಹೋಗಲು ಸುರುಹಚ್ಚಿದ್ದಾನೆ. ಇಂದೀಗ ಬೇರೊಂದು ದಿನ ಚೋಮನೂ ಸುಶೀಲನೂ ಒಂಭತ್ತೂವರೆ ಗಂಟೆ ಸಮಯ ಬೆಳಿಗ್ಗೆ ಉಡಿಗೆ ತೊಡಿಗೆಗಳಿಂದ ಶೃಂಗಾರ ಪುರುಷರಾಗಲು ಜವಳಿ ಅಂಗಡಿಗೆ ಹೋದರು. ಅಲ್ಲಿಗೆ ದಿನಾಲು ಕಾಣುತ್ತಿದ್ದ ನವಯುವ ತಿಯೂ ಬಂದಿದ್ದಳು. ಆ ಯುವತಿಯೊಂದಿಗೆ ಬೇರೊಬ್ಬರಾರೋ ಇರು ವುದನ್ನು ನೋಡಿ ಒಂದೆಡೆ ಸುಶೀಲನಿಗೆ ಕಾಮನ ಆಶೆ ಹೆಚ್ಚುತ್ತಿದೆ. ಒಂದೆಡೆ ಕಡಮೆಯಾಗುತ್ತಿದೆ. ಏನಾದರೂ ಯುವತಿಯ ಮೇಲೆ ಹಾಕಿದ ಕಣ್ಣನ್ನು ಹಿಂತೆಗೆಯುವುದಿಲ್ಲ. ಸುಶೀಲನಿಗೆ ಇವನ ಮುಖವನ್ನು ಅವ ಳಿಂದ ನೋಡಿಸಬೇಕಾಗಿದೆ. ಅನೇಕ ತರದ ಬೀಭತ್ಸಗಳನ್ನು ಮಾಡು

ತ್ತಾನೆ. ಏನೋ ಅಂಗಡಿಯ ಯಜಮಾನನಿಗೆ ಈ ಕಾಮುಕನ ಕೃತ್ಯವನ್ನು ನೋಡಿ ಸಾಕಾಯಿತು. ಬಂದ ಪುರುಷನೂ ಸುಂದರಿಯೂ ಬೇಕು ಬೇಕಾದ ಸೀರೆ ಕುಪ್ಪುಸಗಳನ್ನು ಕೊಂಡುಹೋದರು. ಸುಶೀಲನೂ ಜೋಮನೂ ಹೋಗುವ ವರೇಗೂ ಅಂಗಡಿಯಲ್ಲೇ ಕುಳಿತನು. ಅವನಿಗೆ ಆ ಯುವತಿಯ ತಂದೆ ಯಾರು? ಎಲ್ಲಿನವಳು? ಅವಳ ವಾಸಸ್ಥಾನ ವಾವುದು? ಎಂಬುದು ಬೇಕಾಗಿದೆ. ಅಂಗಡಿಯ ಯಜಮಾನನೊಡನೆ ಕೇಳಿದನು. ಅದಕ್ಕೆ ಅವನು ನಮ್ಮ ಲಕ್ಷ್ಮೀನೃಸಿಂಹ ದೇವಾಲಯದ ಗೋಪಾಲ ಭಟ್ಟರ ಪುತ್ರಿ. ಎಲ್ಲಿರುವುದು ಏನು ತಾನೆಂಬ ಸಂಗತಿಯು ತನಗೆ ತಿಳಿದಿಲ್ಲವೆಂದು ತಿಳಿದಿದ್ದರೂ ಈ ಕೀಚಕನಿಗೆ ಹೇಳಲಿಲ್ಲ.

ಆ ದಿನ ಹೋಯಿತು. ಮಾರನೆಯ ದಿನ ಸಂಜೆಗೆ ಎಂದಿನಂತೆ ಸಮುದ್ರ ತೀರಕ್ಕೆ ಹೋದನು. ಇಂದು ಆ ಯುವತಿಯ ವಾಸಸ್ಥಾನ ವಾವುದೆಂದು ತಿಳಿಯಲು ಕುತೂಹಲವುಳ್ಳವನಾಗಿದ್ದಾನೆ. ಆ ಯುವ ತಿಯ ಆಗಮನವನ್ನು ನಿರೀಕ್ಷಿಸುತ್ತಿದ್ದಾನೆ. ಏನೋ ಬಂದಳು, ಅಲ್ಪ ಕಾಲ ಗಾಳಿ ಸೇವನೆಯನ್ನು ಮಾಡಿದಳು. ಆ ಮೇಲೆ ತನ್ನ ಮನೆಗೆ ಹೋಗಲು ಸುರುಹಚ್ಚಿದಳು. ಸುಶೀಲನೂ ಅವಳ ಬೆನ್ನ ಹಿಂದೆಯೇ ಮೆಲ್ಲಮೆಲ್ಲನೆ ಆಡಿ ಇಡ ತೊಡಗಿದನು. ನಾಲ್ಕೈದಾರು ಬೀದಿಗಳಲ್ಲಿ ಈ ರೀತಿಯಾಗಿ ಅವನ ಅಲೆದಾಟವಾಯಿತು. ಕಡೆಗೆ ಆ ಯುವತಿಯು ಒಂದು ಓಣಿಯ ತುದಿಯ ತನ್ನ ಮನೆಗೆ ಸೇರಿದಳು. ಅದನ್ನು ಇಂದೀಗ ಗುರುತು ಹಚ್ಚಿದನು. ಸುಶೀಲನಿಗೆ ಆ ಯುವತಿಯ ವಾಸಸ್ಥಾನದ ಪರಿಚಯವಾಯಿತು.

ಮಾರನೆಯ ದಿನ ಸಾಯಂಕಾಲ ಅವಳ ಮನೆಗೆ ಹೋಗಬೇಕೆಂದು ನಿರ್ಧರಿಸಿದನು. ಅದಕ್ಕೆ ಒಂದು ಉಪಾಯವನ್ನು ಹೂಡಿದನು. ತಾನೊ ಬ್ಬನು ಕವಿಯಲ್ಲವೇ? ಒಂದೆರಡು ಕವನಗಳನ್ನು ಬರೆದನು. ಯಾವ ಅವನ ಇಂದಿನ ಕವನಗಳೂ ಶೃಂಗಾರಮಯಗಳಾಗಿವೆ, ಆ ಕವನಗಳನ್ನು ಪತ್ರಿಕೆಗಳಿಗೆ ಕಳುಹಿಸಿದನು. ಅವುಗಳೊಂದೂ ಪತ್ರಿಕೆಗಳಲ್ಲಿ ಬರಲಿಲ್ಲ. ಇನ್ನೀಗ ಅದೇ ಕವನಗಳನ್ನು ಹಿಡಕೊಂಡು ಸಂಜೆಯ ಸಮಯ ಆ ಯುವತಿಯ ಮನೆಗೆ ಹೋದನು. ಅಲ್ಲಿಗೆ ಹೋದಾಗ ಅವಳಿದ್ದಿಲ್ಲ.

ಸುಶೀಲನ ಹಿಂದಣ ಗೆಳೆಯ ಶ್ಯಾಮನು ಒಂದು ಮೇಜಿಯ ಬಳಿ ಕುಳಿತಿದ್ದನು! ಏನೋ ಕಾಲ ಸಪ್ಪಳವು ಕೇಳಿದಂತಾಯಿತು. ಶ್ಯಾಮನು ಸುಶೀಲನನ್ನು ಕಂಡನು. ಕೂಡಲೇ ಹಸ್ತಲಾಘವವಾಯಿತು. ಸಮೀಪದ ಕುರ್ಚಿಯ ಮೇಲೆ ಅವನನ್ನು ಕುಳ್ಳಿರಿಸಿದನು. ಒಂದೊಂದು ಮಾತುಕತೆಗಳಾದುವು. ಸುಶೀಲನಿಗೆ ಎಲ್ಲವೂ ಅನುಕೂಲ ಕಂಡಿತು. ಇನ್ನೀಗ ತನ್ನ ಕವಿತೆಗಳನ್ನು ಓದಲು ಅವನೆದುರು ತನ್ನ ಜೇಬಿನಿಂದ ತೆಗೆದನು. ಶ್ಯಾಮನು ಕಾಗದಗಳನ್ನು ಕಂಡು ಏನೆಂದು ಕೇಳಿದನು. ತನ್ನ ಕವಿತೆಗಳೆಂದನು. ಆ ಮೇಲೆ ತನ್ನ ಕವಿತೆಗಳನ್ನು ಓದತೊಡಗಿದನು.

ಅನುದಿನವು ಸಂಜೆಯಲಿ<br>
ಮನದಳಲ ಕಳೆಯಲ್ಕೆ<br>
ಮುನ್ನೀರ ತಡಿಗೈದುತಿರಲು ಬೀಸುತಿಹ ।<br>
ಪನಿನೀರ ಗಾಳಿಗದೊ<br>
ತನ್ನೊಡಲ ತಾನೊಡ್ಡಿ<br>
ಮೋನದಿಂ ಪೋಗುವಳು ಪೆಸರೇನೊ? ॥<br>
ರೂಪದಲಿ ಸಿಂಗಾರಿ<br>
ಯುಪಮೆಯನು ಪೇಳಲ್ಕೆ<br>
ರೂಪುಂಟೆ ಜೇರಿನ್ನು ಲೋಕದಲಿ ॥

ಶ್ಯಾಮ—ಇವುಗಳಲ್ಲದೆ ಇನ್ನಾವ ಕವನಗಳಿವೆ?

ಸುಶೀಲ—ಈ ಕವನವು ಇನ್ನೂ ಮುಗಿದಿಲ್ಲ, ಅರ್ಥವೂ ಆಗಿಲ್ಲ. ಮುಂದಿನ ಪದ್ಯಗಳು ಇದರಿಂದ ಸೊಗಸಾಗಿವೆ. ಎಂದು ಪುನಃ—ಅನುದಿನವು ಎಂಬುದನ್ನೇ ಮೊದಲು ಹೇಳತೊಡಗಿದನು.

ಶ್ಯಾಮನಿಗೆ ಎಲ್ಲಾ ಶೃಂಗಾರಮಯಗಳಾಗಿದ್ದ ಕವಿತೆಗಳೊಂದೂ ರುಚಿಸಲಿಲ್ಲ. ಆದರೂ ಸುಶೀಲನ ಒತ್ತಾಯಕ್ಕೆ ತಲೆಯನ್ನು ಕೊನೆಯಿಸಿ "ಗುಡ್" ಎಂದನು. ಇವುಗಳಲ್ಲದೆ, ಇನ್ನೂ ಕವನಗಳಿವೆ ಎಂದನು. ಅಷ್ಟರಲ್ಲೇ ಅವನ ಮನಪ್ರಿಯಳಾದ ಕಾಮಿನಿಯು ಅಲ್ಲಿಗೆ ಬಂದಳು. ಅವಳು ದೇವಾಲಯದಿಂದ ಈಗ ತಾನೆ ಬಂದಿದ್ದಳು. ದೇವಾಲಯದಿಂದ ತೀರ್ಥಪ್ರಸಾದಗಳನ್ನು ತೆಗೆದುಕೊಂಡು ಕೊಂಚ ಗಂಧವನ್ನೂ ಹೂವನ್ನೂ

ಶ್ಯಾಮ ಸುಶೀಲರ ಮುಂಭಾಗ ಇರುವ ಮೇಜಿಯಲ್ಲಿಟ್ಟಳು. ಶ್ಯಾಮನು ತಾನು ಗಂಧವನ್ನು ನಾಮ ಹಾಕಿ ಹೂವನ್ನು ತನ್ನ ತಲೆಗಿರಿಸಿದನು. ಸುಶೀಲ ನಿಗೂ ತೆಕ್ಕೊಳ್ಳ ಹೇಳಿದನು. ಆದರೆ ಸುಶೀಲನು ಅದೇನೆಂದು ಕೇಳಿದನು.

ಶ್ಯಾಮನು ಇವಳು ದಿನಾಲೂ ದೇವಾಲಯಕ್ಕೆ ಹೋಗುವ ಸಂಪ್ರದಾಯವಿದೆ. ಹೋಗಿಬರುವಾಗ ತೀರ್ಥವನ್ನು ತೆಕ್ಕೊಂಡು ನನಗೂ ಗಂಧ ಪ್ರಸಾದಗಳನ್ನು ತರುವಳೆಂದನು. ಅದಕ್ಕೆ ಸುಶೀಲನು ನನಗೆ ದೇವರ ಮೇಲೆ ವಿಶ್ವಾಸವಿಲ್ಲ. ಈ ಗಂಧಪ್ರಸಾದಗಳಿಂದೇನು ಪ್ರಯೋಜನ ಎಂದನು. ಅಷ್ಟರಲ್ಲಿ ಶ್ಯಾಮನು ಫಕ್ಕನೆ ನಕ್ಕನು. ಸುಶೀಲನಿಗೆ ತನ್ನ ಕಾರ್ಯವು ಆದ ನಂತರ ಹೀಗೆ ಹೇಳುತ್ತಿದ್ದರೆ ಉತ್ತಮವಾಗುತ್ತಿದ್ದಿತು. ಈಗಲೇ ಹೇಳಿ ಸೋತೆನು ಎಂದು ಮನಸ್ಸಿನಲ್ಲಿ ಹೊಳೆಯಿತು. ಕೂಡಲೇ ಸುಶೀಲನು, “ನನಗೆ ಇನ್ನಿತರರು ದೈವಭಕ್ತಿಯುಳ್ಳವರಾಗುವುದರಲ್ಲಿ ದೋಷ ವಿಲ್ಲ. ನಾನು ಅದಕ್ಕೆ ನಿರೋಧಿಸಲಾರೆನು. ನಾನೆಲ್ಲಾದರೂ ದೈವಭಕ್ತಿಯು ಳ್ಳವಳನ್ನು ಮದುವೆಯಾಗಬೇಕಾದರೆ ಅವಳಿಗೆ ಕಷ್ಟವಲ್ಲವೇ?” ಎಂದನು.

ಶ್ಯಾಮನು—ಅದಕ್ಕೆ ಹೀಗಿರುವ ಅಭಿಪ್ರಾಯವುಳ್ಳವನು ನೀನಾದ್ದ ರಿಂದ ನಾನೀಗ ಬದುಕಿದೆ. ಇಲ್ಲವಾದರೆ ನಾನು ಸಂಕಷ್ಟಗಳಿಗೆ ಬೀಳುತಿದ್ದೆ! ಎಂದನು. ಇಂದೀಗ ಸುಶೀಲ ಶ್ಯಾಮರಿಗೆ ಕವಿತೆಯ ಪ್ರಸಂಗಗಳೆಲ್ಲಾ ಬಂದು ಚೆನ್ನಾಗಿ ಪರಿಚಯವಾಯಿತು. ದಿನಾಲು ದೇವಾಲಯಕ್ಕೆ ಆ ಯುವತಿಯು ಹೋಗುವಳೆಂದು ತಿಳಿಯಿತು.

ಆದರೆ ಸುಶೀಲನು ದೇವರ ಪೂಜೆಯ ವಿಷಯವಾಗಿ ನಾಸ್ತಿಕಮತ ವನ್ನು ಬಿಟ್ಟಿಲ್ಲ. ದಿನಾಲು ಸಂಜೆಗೆ ಆ ಯುವತಿಯು ಹೋಗುವ ದೇವಾ ಲಯಕ್ಕೆ ಹೋಗ ಸುರುಹಚ್ಚಿದ್ದಾನೆ. ಹೀಗೆ ಒಂದೆರಡು ವಾರಗಳಾದವು. ಒಂದು ದಿನ ಆ ಯುವತಿಯು ತೀರ್ಥವನ್ನು ಸೇವಿಸುತಿದ್ದಾಳೆ. ಅಷ್ಟರಲ್ಲೇ ಸುಶೀಲನು ತೀರ್ಥಕ್ಕಾಗಿ ಬಂದನು. ಸುಶೀಲನ ಈ ವರ್ತನೆಯನ್ನು ನೋಡಿ ಅವಳು ನಕ್ಕಳು. ಏಕೆಂದರೆ ನಿನ್ನೆಯ ದಿನ ಅವನು ದೇವರ ಪೂಜೆ ಮಾಡಬಾರದು. ದೇವರನ್ನು ಪೂಜಿಸುವುದೇಕೆ? ಎಂಬಿತ್ಯಾದಿಯಾಗಿ ಒಂದು ಲೆಕ್ಚರನ್ನು ಮಾಡಿದ್ದನು. ಅದನ್ನು ಆ ಯುವತಿಯು ಕೇಳಿದ್ದಳು. ಅದಕ್ಕಾಗಿ ಈ ವರ್ತನೆಯು ಇವನನ್ನು ನಕ್ಕುದು. ಸುಶೀಲನಿಗೆ ಅವಳು

ನಕ್ಕುದನ್ನು ಕಂಡು ಸಂತೋಷವಾಯಿತು. ಹೇಗೋ ದೇವಾಲಯದಿಂದ ಹೊರಬಿದ್ದನು. ಅಲ್ಲಿಯೂ ಇವನನ್ನು ನೋಡಿ ಅವಳು ನಕ್ಕಳು. ಅದರಿಂದ ಸುಶೀಲನು ತನಗೆ ಪ್ರೇಮಘಟನೆಯಾಯಿತೆಂದೇ ಭಾವಿಸಿ ನಾಳೆಯೂ ದೇವಾಲಯಕ್ಕೆ ಬರುವುದಿಲ್ಲವೇ ಎಂದು ಕೇಳಿದನು. ಅದಕ್ಕೆ ಯುವತಿಯು ನನ್ನ ನಿತ್ಯಕರ್ಮವಿದೆಂದಳು.

ಹೀಗೆ ಕೆಲವು ದಿನಗಳಾದವು. ಸುಶೀಲನು ಶ್ಯಾಮನ ಮನೆಗೆ ಬಂದನು. ಇಂದೀಗ ಮದುವೆಯ ಮಾತಿನ ದಿನ. ಶ್ಯಾಮನು ಸುಶೀಲನಿಗೆ ಆಸನವನ್ನಿತ್ತನು. ಸುಶೀಲನಿಗೆ ಬಾಯಾರಿಕೆ ಮೊದಲಾದ ಉಪಚಾರ ಗಳಾದವು. ಶ್ಯಾಮನೊಡನೆ ಸುಶೀಲನು ಹಲವು ಕತೆಗಳನ್ನು ಮಾತನಾಡಿ ಮದುವೆಯ ಮಾತನ್ನು ಎತ್ತಿದನು.

ಸುಶೀಲ—ಗೆಳೆಯ, ಇಂದಿನ ಯುಗವು ಹಿಂದಿನ ಸಂಪ್ರದಾಯದಿಂದ ಕೂಡಿದ್ದಲ್ಲ. ಪುರುಷನಿಗೂ ಕನ್ಯೆಗೂ ಅನುರಾಗವಿದ್ದರೆ ವಿವಾಹ. ಇಂದೀಗ ನಿನ್ನ ತಂಗಿಗೂ ನನಗೂ ವಿವಾಹವಾಗಬೇಕಾಗಿದೆ. ನಿನ್ನ ಅಭಿಮತವೇನು?

ಶ್ಯಾಮ—ನನಗೆ ತಂಗಿ ಇಲ್ಲ. ಅಕ್ಕ ಇರುವಳು. ಅವಳಿಗೆ ಪ್ರಾಯವು ತುಂಬ. ನಿನಗೆಷ್ಟು?

ಸುಶೀಲ—ಇಪ್ಪತ್ತೇಳು.

ಶ್ಯಾಮ—ನನ್ನ ಅಕ್ಕನಿಗೆ ಮೂವತ್ತು ವರ್ಷ ಪ್ರಾಯ.

ಸುಶೀಲ—ಅವಳನ್ನೇ ನಾನೀಗ ಕೇಳಿದ್ದು.

ಶ್ಯಾಮ—ಹಾಗಾದರೆ ಅವಳನ್ನು ಕರೆಯುವೆನು.

ಶ್ಯಾಮನು ಒಳಗೆ ಹೋಗಿ ಅಕ್ಕನನ್ನು ಕರಕೊಂಡು ಬಂದನು. ಸುಶೀಲನು ಕೂದಲು ನರೆತ ಇವಳನ್ನು ನೋಡಿ ಇವಳಲ್ಲ ಎಂದನು. ಅಷ್ಟರಲ್ಲೇ ಶ್ಯಾಮನ ಹೆಂಡತಿಯಾದ ಆ ಯುವತಿಯು ಬಂದಳು. ಅವಳನ್ನು ಸುಶೀಲನು ಕಂಡನು. ಅನಂತರ ಸುಶೀಲನು ಬೆರಳನ್ನು ತೋರಿಸಿ ಇವಳೇ ನನ್ನ ಇಚ್ಛಾಪಾತ್ರಳೆಂದನು. ಶ್ಯಾಮನೆಂದನು— "ಇವಳು ನನ್ನ ಹೆಂಡತಿ............!"

ಪ್ರಭಾತ 16-1-1938.

# ಪಿಸಾಸೆಯುಳಿವು

ದಿನಗಳುರುಳಿ ಹಲವು ವರ್ಷಗಳಾದರೂ ನನ್ನ ಸ್ಮೃತಿ ಪಟಲದಿಂದ ಒಂದು ಘಟನೆಯು ಚಿತ್ರವಿದು. ಅಂದು ನಾನು ಎಳೆ ಹರೆಯದವ. ನಾನ ದೊಂದು ಕೆಳಗಿನ ದರ್ಜೆಯಲ್ಲಿ ಕಲಿಯುವ ವಿದ್ಯಾರ್ಥಿ. ನನಗನೇಕ ಸಹ ಪಾಠಿಗಳಿದ್ದರು. ಅವರಲ್ಲಿ ಭೀಮ ಅತಿ ಗೆಳೆಯ. ಆವ ತಂಟೆಗಳಿಗೂ ನಾವಿಬ್ಬರೂ ಒಂದು. ಅವನನ್ನು ಬಿಟ್ಟು ನಾನಿಲ್ಲ. ನನ್ನನ್ನು ಬಿಟ್ಟು ಅವನಿಲ್ಲ.

ಶಾಲೆಯ ಮುಂದೆ ಅದೊಂದು ರನ್ಯೋದ್ಯಾನ. ಅದರಲ್ಲಿ ಒಂದು. ಬಾವಿ. ಬಾವಿಯ ಬಳಿ ಕಾಲ್ತೊಳೆಯಲು ನೀರನ್ನು ತುಂಬಿಡುವ ಪಾತ್ರೆ. ಅದರಿಂದ ಎಲ್ಲರೂ ಪಾದಪ್ರಕ್ಷಾಲನೆಯನ್ನು ಮಾಡುತ್ತಿದ್ದರು.

ಭೀಮನು ಒಬ್ಬ ಚಿತ್ರಗಾರ. ಅವನು ನಮ್ಮ ಉಪಾಧ್ಯಾಯರ ಒಂದು ವ್ಯಂಗ್ಯಚಿತ್ರವನ್ನು ಬರೆದ. ವ್ಯಂಗ್ಯ ಚಿತ್ರದಡಿಯಲ್ಲಿ ವ್ಯಂಗ್ಯ ಮಾತುಗಳನ್ನು ನಾನು ಬರೆದೆ. ಅದನ್ನು ಹಿಡಿದು ನಮ್ಮ ಉತ್ಸಾಹ ಆನಂದವನ್ನು ಪ್ರಕಟಿಸಲಿಕ್ಕೆ ಬಂದೆವು. ಕೊನೆಗೆ ನಮ್ಮ ಮಾತುಕತೆಗಳು ಮುಗಿದು ಚಿತ್ರವನ್ನೂ ಒಂದೆರಡು ಪುಸ್ತಕಗಳನ್ನೂ ಒಂದೆಡೆ ಇರಿಸಿ ಕೈಕಾಲು ತೊಳೆಯ ತೊಡಗಿದೆವು. ಅಷ್ಟರಲ್ಲಿ ಸಹಪಾಠಿ ರಾಮು ಬಂದ. ಅವನು ಬಂದುದು ನಮಗೆ ತಿಳಿದಿಲ್ಲ. ತಿಳಿಯದಂತೆ ನಮ್ಮ ಆ ಚಿತ್ರವನ್ನು ತೆಗೆದು ಮೇಸ್ಟ್ರಲ್ಲಿಗೆ ಸವಾರಿ ಮಾಡಿದ. ಕೂಡಲೇ ಮೇಸ್ಟ್ರ ಆಗಮನವಾಯಿತು. ಅವರು ಬಂದುದೇ ತಡ, ಪುಸ್ತಕವನ್ನು ತೆಗೆಯಲೋಡಿದೆವು. ನೋಡುವುದೇನು! ಚಿತ್ರ ಕಾಣೆ! ಮುಂದೆ ಅತ್ತಿತ್ತ ನೋಡಿ ಹೊರಡುವುದೇ ತಡ. ನಮ್ಮ ಬೆನ್ನುಗಳಿಗೆ ಎರಡೆರಡು ಬೆತ್ತದ ಪೂಜೆಯಾಯಿತು. ನಮಗೆ ಅದರ ಅರ್ಥವಾಗದೆ ಉಪಾಧ್ಯಾಯರನ್ನು ಆರೋಪಣೆಗೊಟ್ಟು ಕೇಳಿದೆವು. ಆಗ ಅವರು "ಶಾಲೆಗೆ ಬರುವುದು; ಓದುವುದು; ಬರೆಯುವುದು; ನಿಮ್ಮ ಕೆಲಸವಲ್ಲ; ಉದ್ಯಾನವನದ ಗಿಡಗಳನ್ನು ಕೆಡಿಸುವುದು; ನೀರನ್ನು ಹಾಳುಗೆಡಹುವುದು; ಆರಾರ ಚಿತ್ರ ಬರೆಯುವುದು; ಮನೆಯವರಿಗೂ ಉಪದ್ರವ ಕೊಡುವುದು; ಶಾಲೆಯವರಿಗೆ ಮತ್ತೆ ಕೇಳಬೇಡ; ಉಂಡುದು ಸುಮ್ಮನಿದ್ದರೆ ಕರಗದು;" ಎಂಬಿತ್ಯಾದಿಯಾಗಿ ಗರ್ಜಿಸಿದರು. ನಾನೂ ಅವನೂ ಅದನ್ನು ಕೇಳಿ ಯಥಾ

ಸ್ಥಾನದಲ್ಲಿ ಕ್ಲಾಸಿನಲ್ಲಿ ಬಂದು ಕುಳಿತೆವು. ಅಂದಿನಿಂದ ಆ ಉಪಾಧ್ಯಾಯರ ದೃಷ್ಟಿಯು ನಮ್ಮಲ್ಲಿ ಬೇರಾಯಿತು.

ಉಪಾಧ್ಯಾಯರನ್ನು ಕೇವಲ ಹಳಿವುದೇಕೆ? ನಾವೇನೂ ತುಂಟಿಯಲ್ಲಿ ಕಡಮೆಯುವರಲ್ಲ. ಅವರ ಕ್ರೂರ ದೃಷ್ಟಿಯು ಬೆಳೆದಂತೆ ನಮ್ಮ ತುಂಟಿಯ ವರ್ತನೆಯೂ ಹೆಚ್ಚಾಗಿ ಬೆಳೆಯಿತು.

ಉಪಾಧ್ಯಾಯರು ಮಾರ್ಕುಗಳನ್ನು ಕೊಡಲು ಕೈ ಹಿಂದೆಳಿಯತೊಡಗಿದರು. ಪಾಠದ ಕಲಿಯುವಿಕೆಯಲ್ಲಿ ನಾವು ಹಿಂದುಳಿಯಲಿಲ್ಲ. ಉಪಾಧ್ಯಾಯರ ಈ ವರ್ತನೆಯು ಸಹ್ಯವಾಗದೆ ಅಧಿಕ ಪೀಡಕರಾಗಿ ನಾವಿಬ್ಬರೂ ನಿಂದೆವು. ಆದರೆ ಅವರು ಪ್ರಧಾನಾಧ್ಯಾಪಕರಿಗೆ (ಹೆಡ್ ಮಾಸ್ಟರ್) ನಮ್ಮ ವಿಷಯದಲ್ಲಿ ಆಕ್ಷೇಪಣೆ ಕೊಡುತ್ತಿದ್ದಿಲ್ಲ. ಅದೇಕೋ ಗುಟ್ಟಿರಟ್ಟಾಗುವದೆಂದೇ? ಅನುಕ್ರಮ ನಮ್ಮ ಮಾರ್ಕುಗಳು ಕುಂದ ಹತ್ತಿ, ಸ್ಥಾನ ವ್ಯತ್ಯಾಸವಾಗ (ಪ್ಲೇಸ್ ಚೇಂಜ್) ತೊಡಗಿತು. ಅಂತಾಗಿ ಮೇಲಿಂದ ಕೆಳಕ್ಕಿಳಿದೆವು. ಇದು ನಮ್ಮ ವರ್ತನೆಯ ಫಲವಾಗಿತ್ತು.

ಕಿರಿಯ ಹಿರಿಯರೆಂಬ ಭೇದವಿಲ್ಲ. ಪದವಿ, ಮಾನ್ಯತೆ, ಸ್ಥಾನ, ಪ್ರತಿಷ್ಠೆಗಳು ಎಲ್ಲರಿಗೂ ಬೇಕು. ಇದು ಸೃಷ್ಟಿ ನಿಯಮ. ಅದಕ್ಕೆ ವ್ಯತ್ಯಾಸ ಬಂದಾಗ ಕ್ರಾಂತಿಯು ಮೊಳೆಯುವುದು. ಅಶಾಂತತೆಯುಂಟಾಗುವುದು. ಪ್ರತಿಕ್ರಿಯೆಯುಂಟಾಗುವುದು. ಅಂತೆಯೇ ನಮ್ಮಿಬ್ಬರಲ್ಲಿ ಉಪಾಧ್ಯಾಯರಲ್ಲಿ ಜುಗುಪ್ಸಾ ಭಾವನೆಗಳು ಪ್ರತಿಕ್ರಿಯಾ ಭಾವನೆಗಳು ಆಗಿಂದಾಗ ಮೊಳೆಗೊಂಡವು.

ಮತ್ತೆ ಹಲವು ದಿನಗಳಲ್ಲಿ ಶಾಲಾ ಪರೀಕ್ಷಕರ ಆಗಮನವಾಯಿತು. ಅವರು ಬಂದ ದಿನ ನಮ್ಮ ಉಪಾಧ್ಯಾಯರು ಕಡೆಯ ಪರೀಕ್ಷಾದಿನವಾಗಿಟ್ಟಿದ್ದರು. ಪರೀಕ್ಷೆಯು ಕಳೆದು ಶಾಲಾ ಪರೀಕ್ಷಕರ ಮುಂದೆ ಪರೀಕ್ಷೋತ್ತೀರ್ಣರ ಹೆಸರುಗಳನ್ನು ಓದಿ ಹೇಳತೊಡಗಿದರು. ಒಂದೆರಡು ಹೆಸರುಗಳ ಹಿಂದೆ ನಮ್ಮ ಹೆಸರು ಬರಬಹುದೆಂದು ಕಾದೆವು. ಎಲ್ಲರ ಹೆಸರೂ ಕೊನೆಗೊಳ್ಳುತ್ತಾ ಬಂತು. ಅನುತ್ತೀರ್ಣರಲ್ಲಿ ನಮ್ಮ ಹೆಸರು ಬಂದಿತು.

ಬಾಲಕರು ನಾವು. ಆರಲ್ಲಿ ಈ ಮೊರೆ ಇಡಲಿ. ಪ್ರಧಾನಾಧ್ಯಾಪಕರಲ್ಲಿ ಹೋಗಲು ಭೀತಿಯು ಬಿಡದು. ತಂದೆತಾಯಿಗಳಲ್ಲಿ ಅತ್ತರೇನು?

ಅವರದೂ ಭೀತಿ. ಎಷ್ಟಾದರೂ ದೊಡ್ಡವರು ಮಾಡಿದುದು ಸರಿ. ಕಿರಿಯವರು ಮಾಡಿದ್ದು ತಪ್ಪು. ಇದು ಲೋಕದ ನಡೆ. ಮುಂದೆ ನಮ್ಮ ಪ್ರತಿಕ್ರಿಯಾ ಭಾವನೆ ಬಲಗೊಂಡಿತು. ಒಂದೊಂದು ವರ್ಷ ಹಾಳಾಗುವ ಸ್ಥಿತಿಗೂ ಮುಟ್ಟಿತು. ದರ್ಜೆಯು ಇನ್ನಿತರ ಶಿಬಿರದ ವಿದ್ಯಾರ್ಥಿಗಳಿಂದ ಹೀನದೆಶೆಯು ನಮಗೊದವಿ ಮನಶ್ಶಲ್ಯವು ಬಲವಾಗಿ ವೇದನೆಗೊಡಹತ್ತಿತು.

ಮಧ್ಯಾಹ್ನ ಎರಡು ಗಂಟೆಯ ಸಮಯ. ನಮ್ಮ ಉಪಾಧ್ಯಾಯರು ಕಕ್ಷೆಗೆ ಬರಲಿಲ್ಲ. ನಾವಿಬ್ಬರು ನಮ್ಮ ನಮ್ಮ ವೇದನೆಯೊಡಗೊಂಡು ಉದ್ಯಾನದಲ್ಲಿ ಸಂಚರಿಸತೊಡಗಿದೆವು. ಭೀಮ ಅಲ್ಲಿ ಇಲ್ಲಿ ಅಲೆಯುತ್ತಿದ್ದ. ನಾನು ಒಂದೆಡೆ ನಿಂತಿದ್ದೆ. ಪಾಸು ವೇಳೆಯಲ್ಲಿ ಭೀಮನು ಓಡುವುದು ಕಂಡೆ. ನಾನೂ ಅವನ ಹಿಂದೆ ಓಡಿದೆ. ಉಪಾಧ್ಯಾಯರು ಪಾತ್ರೆಯಿಂದ ನೀರು ಮೊಗೆದು ಮೊಗ ತೊಳೆಯತೊಡಗಿದ್ದರು. ಭೀಮ ತನ್ನ ಪಾದರಕ್ಷೆಯಿಂದ ಉಪಾಧ್ಯಾಯರ ಪೃಷ್ಠಭಾಗಕ್ಕೆ ಪ್ರಹಾರವೃಷ್ಟಿಯನ್ನು ಕರೆದ. ನಾನವನ ಹಿಂದೆಯೇ ಬಂದು ಅವರನ್ನು ಬಲವಿಡಿದು ಅದಕ್ಕೆ ಸಹಾಯಕನಾದೆ. ಉಪಾಧ್ಯಾಯರು ಕೂಗಿತ್ತರು. ಅಷ್ಟರಲ್ಲಿ ನಾವಿಬ್ಬರೂ ಅವರನ್ನುಳಿದು ವಿದ್ಯಾರ್ಥಿ ಭವನಕ್ಕೆ ಸೇರಿದೆವು. ಕೂಡಲೇ ಹೊರಡುವ ಬಸ್ಸು ಗಾಡಿಗೆ ಅರ್ಧಮರ್ಧ ಸಾಮಾನುಗಳನ್ನು ಎತ್ತಿ ಹಿಡಿದು ಹೊರಟೆವು. ಮನೆಗೆ ಬಂದು ಸೇರಿದೆವು.

ಮುಂದೆ ಏನಾಯಿತು? ಎಂಬಿತ್ಯಾದಿಗಳು ಯಾರಿಗೆ ಗೊತ್ತು! ಮನೆಗೆ ಸೇರಿ ನಮ್ಮ ನಮ್ಮ ಸರ್ಟಿಫಿಕೇಟುಗಳಿಗೆ ಹಿರಿಯರ ಮೂಲಕ ಬರೆಸಿದೆವು. ನಾವಿಬ್ಬರೂ ಪ್ರಮಾಣಪತ್ರದಲ್ಲಿ ಉತ್ತೀರ್ಣರಿದ್ದೆವು. ಬೇರೆ ಪಾಠಶಾಲೆಗೆ ಹೋಗಿ ಸೇರಿದೆವು. ಮಕ್ಕಳು ಮಕ್ಕಳು. ಉಪಾಧ್ಯಾಯರು ಇಂತಹ ವರ್ತನೆಯನ್ನು ಕೈಕೊಂಡರೆ ಎಂಬ ಪ್ರಶ್ನೆಗೆ ಇದು ಉತ್ತರ. ಇಲ್ಲಿಗೆ ನವಿಹ್ಹಾರ್ವರ ಪಿಪಾಸೆಯಳಿಯಿತು.

ನವಭಾರತ 2-11-1942

# ರಸಿಕರಾಯರು



ಕೆಲವರಿಗೆ ಕುಲಗೋತ್ರಗಳ ವ್ಯಕ್ತಿಯ ಬಹಿರಾಕಾರದ, ಪರಿಚಯದಲ್ಲಿ ಅತ್ಯಾಸಕ್ತಿ; ಇನ್ನು ಕೆಲವರಿಗೆ ಮಂದಿಗಳ ಹೃದಯಪರಿಚಯದಲ್ಲಿ. ರಾಯರು ಎಂತಹರೆಂಬುದನ್ನು ಓದಿದಾಗಲೇ ನಿಮಗೆ ತಿಳಿಯುವುದು. ರಾಯರು ಮೇಧಾವಿಗಳು. ಒಳ್ಳೆಯ ಪದವೀಧರರು. ನೌಕರಿಯು ಅವರಿಗಿಲ್ಲ. ಪೈತೃಕವು ಅವರ ಜೀವಿಕೆಗೆ ಆಸರೆ. ಅವರ ಹೆಸರು ನಮ್ಮೂರ ಮಂದಿಗೆ ಎಲ್ಲರಿಗೂ ತಿಳಿದಿದೆ. ಹಿರಿಕಿರಿಯರು, ಬಡವರು, ಧನಾಢ್ಯರು, ಓದುಬರಹವುಳ್ಳವರು, ಇಲ್ಲದವರು—ಎಲ್ಲರಿಗೂ ಗೊತ್ತಿದೆ. ಮನುಷ್ಯನ ಹೆಸರುವಾಸಿಯಾಗಲು ಹಲವು ಕಾರಣಗಳಿರುತ್ತವೆ. ಧನದಿಂದ ಮುಂದರಿದು ಬರುವವರು ಕೆಲವರು; ಜನತೆಗೆ ಉಪಕಾರವನ್ನಿತ್ತು ಬೆಳಕಿಗೆ ಬರುವವರು ಇನ್ನು ಕೆಲವರು; ನ್ಯಾಯಧರ್ಮಗಳ ಪಾಲನೆಯಿಂದ ಹಲವರು. ಅವನ ಹೆಸರಿನ ಬಳೆಯುವಿಕೆಗೂ ನ್ಯಾಯ ಬೇಕು; ಧರ್ಮ ಬೇಕು. ಜನತೆಯ ಹಿತ ಬೇಕು. ಇಂತಹರ ಹೆಸರು ಶಾಶ್ವತ. ರಾಯರು ಹೆಸರುವಾಸಿಯಾಗಲು ಏನು ಕಾರಣವೆಂದು ನಮಗೆ ಬೇಕಿದೆ. ಅವರ ಬುದ್ಧಿ, ತಿಳಿವುಗಳಲ್ಲ; ನ್ಯಾಯಮಾರ್ಗವಲ್ಲ. ಸಮಾಜದ ಹಿತಕಾಂಕ್ಷೆಯಿಂದ ಬಳೆದಿದೆ. ಅವರು ಸಹಶಿಕ್ಷಣ, ಸ್ತ್ರೀಸ್ವಾತಂತ್ರ್ಯ ವಿಷಯದಲ್ಲಿ ತುಂಬಾ ಅಭಿಮಾನಿಗಳು. ಅದಕ್ಕಾಗಿ ದುಡಿಯುವರು. ಅವರು ಹಿರಿಯರು ನೆಲಸಿದ ಒಂದು ಕಲಾನಿಲಯವು ಅವರ ಅಧಿಕಾರದಲ್ಲಿದೆ. ಕಲಾ ನಿಲಾನಿಲಯವು ಇವರ ಅಧಿಕಾರಕ್ಕೆ ಬಂದಂದಿನಿಂದ ಮಕ್ಕಳ ಸಂಖ್ಯೆಯಿಂದ ತುಂಬಿದೆ. ಉಪಾಧ್ಯಾಯರು ಮಕ್ಕಳ ಸಂಖ್ಯೆಗೆ ಅನುಸರಿಸಿ ಹೆಚ್ಚಿರುವರು.

ಹಿಂದೀಯರಲ್ಲಿ ಸ್ತ್ರೀಶಿಕ್ಷಣದ ಸಮಸ್ಯೆಯು ಇದೆ. ಸ್ತ್ರೀಯರಿಗೆ ಶಿಕ್ಷಣವು ಬೇಕು. ಆ ಶಿಕ್ಷಣವು ಸಹಶಿಕ್ಷಣವಾಗಿರುವುದರಿಂದ ಉತ್ತಮ. ಸಹಶಿಕ್ಷಣದಿಂದ, ಸ್ತ್ರೀಯರಿಗೆ ಬಾಲಕರಲ್ಲಿರುವ ಚತುರತೆಯು ಕಂಡು ಬರುವುದು. ಪುರುಷರೊಡನೆ ನಿರ್ಭೀಕತೆಯಿಂದ ವ್ಯವಹರಿಸುವ ಶಕ್ತಿ; ಸ್ವಾತಂತ್ರ್ಯಸ್ವಾವಲಂಬನದ ಹೆದ್ದಾರಿಗಳು ಉಂಟಾಗುವವೆಂಬ ಶಿಕ್ಷಣ ಶಾಸ್ತ್ರಮನಶ್ಶಾಸ್ತ್ರಜ್ಞರ ಅಭಿಪ್ರಾಯವಿದ್ದರೂ ರಾಯರಿಗೆ ಅದರಲ್ಲಿ ನಂಬುಗೆ

ಯಿಲ್ಲದಿಲ್ಲ. ಅದರೊಂದಿಗೆ ಹಲವಾರು ಸಮಸ್ಯೆಗಳ ಪರಿಹಾರಮಾರ್ಗವನ್ನು ಕಂಡಿರುವರು. ರಾಯರಿಗೆ ಕಲಾ ನಿಲಯಾಧಿಕಾರವು ದೊರೆತಂದಿನಿಂದ ಸ್ತ್ರೀಸಹಶಿಕ್ಷಣದ ಪ್ರಚಾರವನ್ನು ತಮ್ಮ ಕಲಾನಿಲಯದಲ್ಲಿ ಮಾಡಿಸ ಹತ್ತಿದರು. ಅದರೊಂದಿಗೆ ಸ್ತ್ರೀಯರಿಗೆ ಸಂಬಳದ ವಿಷಯದಲ್ಲಿ ಪುರುಷ ರಷ್ಟಿಲ್ಲದೆ ಮಾಡಿದರು. ಅಂತೂ ಹುಡುಗರ ಅರ್ಧ ಸಂಬಳದ ನಿಯಮ ವನ್ನು ತಮ್ಮ ಕಲಾನಿಲಯದಲ್ಲಿ ತಂದರು. ಇದರಿಂದ ಇವರ ಹೆಸರು ಮಹಿಳೆಯರಿಗೆ ಪ್ರಿಯವಾಯಿತು. ಮಹಿಳೆಯರಿಗೆ ಪ್ರಿಯವಾದುದು ಪುರುಷರಿಗಂತೂ ಪ್ರಿಯವೇ. ಪುರುಷನ ಅರ್ಧಾಂಗಿ, ನಾರಿ. ಅರ್ಧಾಂಗದ ಮೋಹವು ಒಂದೆಡೆ ಹೋದೊಡನೆ ಉಳಿದ ಅರ್ಧಾಂಗವು ಅದರ ಅಧೀನ ವಿರುವುದು ಸಹಜ. ಸಿನೆಮಾಗೃಹಗಳಲ್ಲಿನ ಮಂದಿಗಳಿಗೆ ಇದರ ಮಾಹಿತಿ ತಿಳಿದಿದೆ. ಅವುದಾದರೂ ಕಲ್ಯಾಣವು ಪ್ರದರ್ಶನ ಗೃಹಕ್ಕೆ ಬಂದರೆ ಸಾಕು. ನಾರೀಶ್ವರರು ಬಂದೇ ಬರುವರು. ಅದರೊಂದಿಗೆ ಜನಸಂಖ್ಯೆಯು ಏರು ವುದು. ನಾರಿಯರಿಂದಲೂ ನಾರೀಪ್ರಿಯರಿಂದಲೂ ತುಂಬಿ ಸಿನೆಮಾ ಮಂದಿರವು ಜನಭರಿತವಾಗುವುದು. ಇದು ಚಲಚ್ಚಿತ್ರ ಗೃಹಗಳ ಮಾಹಿತಿ. ರಾಯರು ಕಲಾನಿಲಯದಲ್ಲಿ ಸಹ ಶಿಕ್ಷಣವನ್ನಿರಿಸಿದುದರಿಂದ ಜನಪ್ರಿಯ ರಾದರು. ಸ್ತ್ರೀಯರೆಲ್ಲರೂ ಮುಕ್ತಕಂಠವಾಗಿ ಅವರಿಗೆ ಚಿರಋಣಿಗಳೆಂದು ಘೋಷಿಸಹತ್ತಿದರು. ಬಾಳುವೆಯಲ್ಲಿ ಅದನ್ನು ತೋರಿಸತೊಡಗಿದರು. ಈ ನಿಯಮದಲ್ಲಿ ಅವರ ಕಲಾನಿಲಯದ ಹಲವಾರು ಉಪಾಧ್ಯಾಯರಿಗೆ ಸಹಾನುಭೂತಿ ಇದೆ. ಇನ್ನು ಅನೇಕರಿಗೆ ಸಂತಾಪವಿದೆ. ಸಂತಾಪದ ಅನುಭವವನ್ನೇ ತೋರುತ್ತಿರುವ ಮಂದಿಗಳು ಶಾಲೆಯ ಉಪಾಧ್ಯಾಯ ವೃತ್ತಿಯನ್ನು ಅವಲಂಬಿಸಿರುವರಾದರೂ ಅವರ ಚಟುವಟಿಕೆಗಳನ್ನು ತೋರ ದಿರುವ ಕಾರಣ ರಾಯರ ಪ್ರಿಯರೆನಿಸಿಲ್ಲ. ಅಧಿಕಾರವಾಣಿಯ ಕಲಾ ನಿಲಯದ ಕಾರ್ಯನಿಯಮದ ಗೋಷ್ಠಿಗೆ ಇದರಿಂದ ಅವರು ಒಳಪಟ್ಟಿಲ್ಲ. ಅದೇನಿದ್ದರೂ ಇರಲಿ. ಇದು ರಾಯರ ಯಶಸ್ಸಿಗೂ ಕಲಾನಿಲಯದ ಭ್ರಾತೃ ಭಗಿನಿಯರ ಅಭಿವೃದ್ಧಿಗೂ ಕಾರಣ.

ರಾಯರಿಗೆ ಸಹ ಶಿಕ್ಷಣವೊಂದರಲ್ಲಿ ಮಾತ್ರ ಮನೀಷೆಯಿಲ್ಲ. ಅವರು ಪುರುಷರಿಗಿಂತ ಸ್ತ್ರೀಯರೇ ಕಲಿಸಲು ಹುಡುಗ ಹುಡುಗಿಯರಿಗೂ

ಶಕ್ತರೆನ್ನುವರು. "ಮಕ್ಕಳನ್ನು ಆಲುಗಾಡಿಸಿದ ಕೈ ಭೂಲೋಕವನ್ನು ಅಲುಗಾಡಿಸಲು ಶಕ್ತಿಯುಳ್ಳದಲ್ಲವೆ" ಎಂದು ಅವರ ಸಿದ್ಧಾಂತ. ಈ ಸಿದ್ಧಾಂತಕ್ಕೆ ನಾವು ತಲೆದೂಗಬೇಕಾಗಿದೆ. ಅವರ ಅಭಿಮತದಂತೆ ಅಧಿಕಾರ ವಿರುವಾಗ ಮಾಡದೆ ಉಳಿಯುವರೇ? ಭಗಿನಿಯರು ಇವರಿಂದ ಶಿಕ್ಷಣ ವನ್ನೀಯುವ ವೃತ್ತಿಗೆ ಅನರ್ಹರೆಂದು ಇದರಿಂದ ಯಾರೂ ತಿಳಿಯುವುದು ಬೇಡ. ಮನೆಬಾಳ್ವೆಯ ಹೆಂಗುಸು ಕಲಾಬಾಳ್ವೆಗೆ ಹೊರಗೀಳಿದರೆ ಅದಾರು ಸರಿಯೆನ್ನುವರು? ಕುದುರೆಗೂ ಒಂಟೆಗೂ ಕೆಲಸದಿಂದ ಒಂದೇ ಭಾವನೆ ಯನ್ನು ಕಾಣುವುದು ತಪ್ಪು. ಮಾನವವ್ಯಕ್ತಿಯು ದಿನೇ ದಿನೇ ಸುಧಾ ರಣೆಯನ್ನೆಳಸುವನು. ಹಳೆಯ ಕಟ್ಟನ್ನು ಮೂಲೆಪಾಲಾಗಿಸುವನು. ಇದು ಜೀವನದ ಇಲ್ಲವೇ ಮುಂಬರಿವ ಬಾಳಿನ ಕ್ರಮವಿದ್ದರೂ ಸ್ತ್ರೀಯ ಅವಯವರಚನೆ ಪುರುಷನಂತಲ್ಲ. ಪುರುಷನು ಹೇಡಿಯಲ್ಲ. ಹೆಂಗುಸು ಪರಾವಲಂಬಿನಿ; ಅವಳು ಮಾತೆ. ಮಾತೆಯು ಮನೆ ಬಿಟ್ಟರೆ ಮಕ್ಕಳಿಲ್ಲ. ಇದ್ದ ಮಕ್ಕಳು ಫಕೀರರಾಗಬೇಕಾಗುವುದು. ಶಿಕ್ಷಣ ಸಮಸ್ಯೆಯನ್ನು ನೋಡುವಾಗ ರಾಯರ ಸಿದ್ಧಾಂತವು ಉತ್ತಮವೆಂದು ನಾವೇಕೆ ಹೇಳ ಬೇಕು. ಅವನವನ ಸಿದ್ಧಾಂತವನ್ನು ಹೊರಗೆಡವದಿದ್ದರೆ ಅವನಲ್ಲಿ ಪುರುಷ ತನವಿಲ್ಲ. ಮಕ್ಕಳಿಗೆ ಹೆಂಗಸು ಕಲಿಸುವಳು. ಕಲಿಸಲು ಶಕ್ತಳು. ಅವಯವಸೃಷ್ಟಿ ಕ್ರಮದಂತೆಯೇ ಅವಳ ಬುದ್ಧಿಯಲ್ಲೂ ಪುರುಷಬುದ್ಧಿ ಯಲ್ಲೂ ಭೇದವಿದೆ. ಪುರುಷನು ಹೆಣ್ಣನ್ನು ಅಡಿಯಾಳಾಗಿಸುವ; ಗಂಡು ಅವಳ ಅಡಿಯಾಳಾಗಲಾರ. ಸ್ತ್ರೀಯು ಶಿಕ್ಷಣವನ್ನು ಮಾಡಹೊರಟರೆ ಯಾರೂ ಬಾಗರು. ಗೊಂದಲವೇ ಗೊಂದಲ. ಗಂಡು ಮಕ್ಕಳಲ್ಲೂ ಈ ಭಾವನೆಯುಂಟಾವುದು ಸಹಜ. ನಾರಿಯರಿಗಿನ್ನೂ ಸಹಜ. ನಾರಿಯು ಅಧಿಕಾರವಾಣಿಯಿಂದ ಕೇಳಿದರೆ ಆಗಲೇ ಗೊಂದಲವೇಳುವುದು. ಇದನ್ನೇ ನಾವು ಶಿಕ್ಷಣದಲ್ಲಿ ಕಾಣುತ್ತೇವೆ. ರಾಯರು ಸ್ತ್ರೀಯರನ್ನು ಉಪಾಧ್ಯಾ ಯಿನಿಯರನ್ನಾಗಿ ಸಹ ಶಿಕ್ಷಣದ ಕಲಾ ನಿಲಾನಿಲಯದಲ್ಲಿ ಸ್ವೀಕರಿಸಿರು ವರು. ಇದರಿಂದ ಇನ್ನಷ್ಟೂ ಅವರ ಯಶಸ್ಸು ಬೆಳಕಿನಿಂದ ತುಂಬಿತು.

ಈ ವರ್ಷ ಆರಂಭವಾದುದೇ ತಡ. ವಿದ್ಯಾರ್ಥಿ ವಿದ್ಯಾರ್ಥಿನಿಯರ ಸಂಖ್ಯೆಯು ಹೆಚ್ಚಿತು. ಸಂಖ್ಯೆಯು ಹೆಚ್ಚಿದೊಡನೆ ಮೊದಲನೆ ಉಪಾಧ್ಯಾಯ

ಂಗೆ ಪಿರಿಡ್‌ಗಳನ್ನು ಹೆಚ್ಚುಮಾಡಿದರೂ ಇದ್ದ ಉಪಾಧ್ಯಾಯರು ಸಾಕೆನಿಸ ಲಿಲ್ಲ. ಕೂಡಲೇ ಮೂರು ಉಪಾಧ್ಯಾಯರ ಅಗತ್ಯವು ಬಂದು ಮೂರು ಹೆಂಗಸರಿಗೇ ಆ ಸ್ಥಾನವೆಂದು ಪತ್ರಿಕೆಯಲ್ಲಿ ಜಾಹೀರುಪಡಿಸಿದರು. ಪತ್ರಿಕೆಯ ಜಾಹೀರನ್ನು ನೋಡುವ ಮಂದಿ ಎಷ್ಟಿಲ್ಲ! ಜಾಹೀರು ಜುಲಾಯಿ ತಿಂಗಳ ಮೂರನೆ ವಾರದ ಒಳಗೆ ಅರ್ಜಿಯ ಪತ್ರಗಳು ಮುಟ್ಟಬೇಕೆಂದಿ ದ್ದಿತು. ಈ ಪ್ರಕಟಣೆಯು ಆವಾವ ಊರುಗಳಿಗೆ ದೇಶವಿದೇಶಗಳಿಗೆ ಸೇರುವುದಿಲ್ಲ! ಮದ್ರಾಸಿನಲ್ಲಿದ್ದ ಕೋಮಲೆಯು ಕಂಡಳು. ಅವಳು ಬಿ. ಎ. ಪಾಸುಮಾಡಿದ್ದಾಳೆ. ಎಲ್. ಟಿ. ಪರೀಕ್ಷೆಯಲ್ಲಿ ಉತ್ತೀರ್ಣ ಳಾಗಿಲ್ಲ. ಆದರೆ ಅವಳಿಗೆ ಎಲ್ಲಾದರೂ ಕೆಲಸಕ್ಕೆ ಸೇರಬೇಕೆಂದು ಶಾಲಾ ಪ್ರಕಟಣೆಗಳನ್ನು ಅವಳು ಪತ್ರಿಕೆಗಳಲ್ಲಿ ನೋಡುವಳು. ಆಕೆ ರಾಯರ ಹೆಸರನ್ನೂ ಅವರ ಶಾಲೆಯ ವಿಚಾರವನ್ನೂ ಈ ಮೊದಲೇ ಪತ್ರಿಕೆಗಳ ಮೂಲಕ ತಿಳಿದಿರುವಳು. ಅವಳಿಗೆ ಅಂದಿನಿಂದಲೇ ರಾಯರಲ್ಲಿ ಭಕ್ತಿ. ಇಂದು ರಾಯರ ಶಾಲೆಯ ಜಾಹೀರಾತನ್ನು ಕಂಡುದೇ ತಡ. ಅವಳಿಗೆ ಅವರ ಕಲಾನಿಲಯದಲ್ಲಿದ್ದು ಸೇವೆಯನ್ನು ಸಲ್ಲಿಸಬೇಕೆಂದು ಮನೀಷೆಯು ಒಡಲಲ್ಲಿ ಮೂಡಿತು. ಅವಳು ಅರ್ಜಿಪತ್ರಗಳನ್ನು ತಯಾರಿಸಿ ತಾನು ಬಿ. ಎ., ಎಲ್. ಟಿ.ಯಲ್ಲಿ ಪಾಸಾಗಿಲ್ಲವಾದರೂ ಮುಂದೆ ಸಪ್ಟಂಬರದಲ್ಲಿ ಕುಳಿತುಕೊಳ್ಳುವೆನೆಂದು ಸೂಚಿಸಿ ಕಳುಹಿದಳು. ಅದಲ್ಲದೆ ರಾಯರಿಗೆ ಬೇರೆಯಾಗಿ ಒಂದು ಪತ್ರವನ್ನು ತನ್ನ ಕೆಲಸದ ಸಲುವಾಗಿ ಬರೆದಳು. ಅದಕ್ಕೆ ಆ ಜಾಹೀರಾತಲ್ಲಿ ಅರ್ಜಿದಾರರು (ಇಂಟರ್‌ವ್ಯೂ) ಭೇಟಿಯನ್ನೂ ಮುಖಬಿಲ್ಲೆಯನ್ನೂ ಮಾಡಬೇಕೆಂದು ಬಹಿರಂಗಪಡಿಸಿದ್ದೇ ಕಾರಣವಾ ಗಿತ್ತು. ಕೋಮಲೆಯ ಪತ್ರವು ಇಂತಿದ್ದಿತು:—

ಪ್ರಿಯ ರಾಯಮಹಾಶಯರ ಚರಣಾರವಿಂದಗಳಲ್ಲಿ ಬಿನ್ನಹಗಳು.

ತಮ್ಮ ಕಲಾನಿಲಯದಲ್ಲಿ ಮೂರು ಉಪಾಧ್ಯಾಯರ ಸ್ಥಾನಕ್ಕೆ ಉಮೇ ದ್ವಾರರು ಬೇಕೆಂಬ ಪ್ರಕಟಣೆಯನ್ನು ನೋಡಿ ನನಗೆ ಹಿಡಿಯಲಾರದ ಆನಂದ. ತಮ್ಮ ಚರಿತ್ರೆ ಗುಣ ಯಶೋಗಾನಗಳನ್ನು ಹಿಂದೆ ನಗರದ ನಾರೀ ನರರಿಂದ ತಿಳಿದಂದಿನಿಂದ ತಮ್ಮಲ್ಲಿ ಇದ್ದು ಸೇವಾವೃತ್ತಿಯನ್ನವಲಂಬಿಸ ಬೇಕೆಂಬಮನದಣಿಕೆದುಂಬಿದವಳಾಗಿದ್ದೆ. ಅದಿಂದು ಘಟಿಸುವ ದೈವ

ಯೋಗದ ಕಾಲವು ಸನ್ನಿಹಿತವಾಗಿದೆಯೆಂದು ನಂಬಿರುವೆ. ಭೆಟ್ಟಿಗೆ ಬರುವ ಮಂಗಳವಾರ ಬೆಳಗ್ಗಿನ ಗಾಡಿಗೆ ಬರುವೆ.

ಇತಿ ತಮ್ಮ ಸೇವಾಭಿಲಾಷಿ,

ಮದರಾಸು, ಕೋಮಲಾ.

............19 .......

ರಾಯರಿಗೆ ಈ ಪತ್ರದ ಪ್ರಥಮ ವಾಕ್ಯವನ್ನು ಕಂಡು ಆನಂದೋಲ್ಲಾಸಗಳು ಉಕ್ಕಿದುವು. ಇತರ ಅರ್ಜಿ ಪತ್ರಗಳೂ, ಪತ್ರಗಳೂ ಬಂದಿದ್ದರೂ ಭಾಷೆಯೇ ಹಿಡಿಯಲಿಲ್ಲ. ಅವುಗಳಲ್ಲೆಲ್ಲಾ ಒಂದು ವಿಧದ ಜುಗುಪ್ಸೆ. ಪತ್ರವನ್ನು ಎರಡು ಮೂರು ಬಾರಿ ಓದಿದರು. ಪ್ರತಿ ಶಬ್ದಗಳೂ ಮಧುರವಾಗಿದ್ದು ಶಾಲಾ ಉಪಾಧ್ಯಾಯ ವೃತ್ತಿಯ ಒಂದು ಸ್ಥಾನವನ್ನು ಅಕೆಗೆ ಸಲ್ಲಿಸುವ ನಿರ್ಧಾರಯುಕ್ತರಾದರು. ಪತ್ರ ಬಂದಂದಿನಿಂದ ಆಕೆಯ ಸಂದರ್ಶನಾವಸರವು ಮೊತ್ತಮೊದಲು ಉಂಟಾಗುವ ಸುಯೋಗದ ದಿನವನ್ನು ಬಯಸಹತ್ತಿದರು.

ಕೋಮಲೆಯು ಸೇವಾವೃತ್ತಿಯನ್ನು ಅವಲಂಬಿಸುವ ವಿಚಾರಕ್ಕಿಂತಲೂ ಆ ಹೆಸರು ಸುಲಲಿತ ಮಾಧುರ್ಯ ರಸಪೂರ್ಣವಾಗಿದ್ದು ತನ್ನಾಮಸ್ಮರಣಾನ್ವಿತರಾದರು.

ಅದು ಮಂಗಳವಾರ; ಮಂಗಳವಾರವನ್ನು ಅದೇಕೆ ಕಡ್ಡವಾರವೆಂದು ಹೇಳುವರೋ ಅವರರಿಯರು. ಮಂಗಳವಾರವು ತನಗೆ ಮಂಗಳಕರವಾದ ವಾರವೆಂದೇ ಭಾವನೆಗೊಂಡರು. ಬೆಳಗ್ಗೆ ಮುಖ ಕ್ಷೌರವನ್ನು ಮಾಡಿಸಿದರು. ಖಾದಿಯ ಪೋಷಾಕನ್ನು ಹಾಕುತ್ತಿರುವರಾದರೂ ಅಂದು ಉತ್ತಮ ಮಡಿಮಾಡಿದ ಉಡುಪನ್ನು ಧರಿಸಿದರು. ಕನ್ನಡಿಯ ಮುಂದೆ ನಿಂತು ಉಡಿಗೆಯನ್ನೇರ್ಪಡಿಸಿಕೊಂಡರು. ಅದಲ್ಲದೆ ಆಫೀಸಿನ ಕೋಣೆಯನ್ನು ಅಲ್ಪವಾಗಿ ಸಿಂಗರಿಸಿದರು. ಒಂದೆರಡು ವಿರಾಮಾಸನಗಳನ್ನು ತಂದಿಡುವಂತೆ ಕೆಲಸದವನಿಗೆ ಹೇಳಿದರು. ಅವನು ಅಂತೆಯೇ ಮಾಡಿದ. ಗಂಟೆಯನ್ನು ನೋಡಿದರು. ಮುಖದ ಮೀಸೆಯು ಒಂದೆರಡು ಬಣ್ಣಗೆಟ್ಟಿದ್ದುವು. ಕನ್ನಡಿಯ ಮುಂದೆ ಹೋಗಿ ಅವುಗಳನ್ನು ಕಿತ್ತು ಅಲ್ಪ

ಬಣ್ಣ ಸವರಿಗೊಂಡರು. ಮುಖವನ್ನು ಅಂದಗೊಳಿಸಿದರು. ಪೇದೆಯನ್ನು ಹೊರಗೆ ಬಾಗಿಲು ಕಾಯಲು ಹೇಳಿದರು. ಬಂದವರನ್ನು ಒಬ್ಬೊಬ್ಬ ರಾಗಿಯೇ ಒಳ ಹೋಗಗೊಡುವಂತೆ ಆಜ್ಞಾಪಿಸಿದರು. ರೈಲುಗಾಡಿಯು ಬರುವ ವೇಳೆಯನ್ನು ನಿರೀಕ್ಷಿಸಿದರು. ಸಮಯವು ದಾಟಿ ಎರಡು ನಿಮಿಷ ಗಳಾಗಿದ್ದುವು. ಮತ್ತೊಮ್ಮೆ ಉಡಿಗೆಯನ್ನು ಸಿಂಗರಿಸಿದರು. ತಿಲಕರ ಗೀತೆಯನ್ನು ಮೇಜಿನ ಮುಂದೆ ಇಟ್ಟರು. ಮುಂದೆ ಅದನ್ನು ತೆಗೆದು ಕೈಯಿಂದ ಹಾಳೆಗಳನ್ನು ತಿರುವ ಹತ್ತಿದರು. ಅಷ್ಟರಲ್ಲಿ ಹೊರಗಿನಿಂದ ಕಾಲಸಪ್ಪಳವು ಕೇಳಬಂದಿತು. ಆದಾಗ ರಾಯರು ಬಹಳ ತೀವ್ರ ಅವ ಗಾಹನಾ ದೃಷ್ಟಿಯಿಂದ ದೊಡ್ಡ ಪುಸ್ತಕದ ಮೇಲೆ ಕಣ್ಣಿರಿಸತೊಡಗಿದರು. ಹೊರಗಿನಿಂದ ಕಾಲಸಪ್ಪಳ ಕೇಳಿದೊಡನೆ ರಾಯರು ಕೋಮಲೆಯೆಂದೇ ಭಾವಿಸಿದರು. ಆ ಎಣಿಕೆಯು ತಪ್ಪಾಗಿರಲಿಲ್ಲ. ಪೇದೆಯು ಹೇಳಿದ. ವಿಸಿಟಿಂಗ್ ಕಾರ್ಡನ್ನು ರಾಯರಿಗೆ ಕೊಟ್ಟ. ಕೂಡಲೇ ರಾಯರು ಒಳಬರ ಗೊಡುವಂತೆ ಹೇಳಿದರು. ಈ ಎಡೆ ರಾಯರು ಗುಮಾಸ್ತರಿಗೆ ಕೂಡಲೇ ಕೆಲಸದ ಆಜ್ಞಾಪತ್ರವನ್ನು ಟೈಪು ಮಾಡಗೊಟ್ಟಿದ್ದರು. ಕೋಮಲೆಗೆ ಆ ಕೆಲಸವನ್ನು ಕೊಡುವುದರಲ್ಲಿ ಎಣಿಕೆಯುಳ್ಳವರಾಗಿದ್ದರು. ಕೋಮಲೆಯು ಒಳಬಂದಳು. ಹೆದರಿ ಹೆದರಿ ಒಳಗಾಲಿಟ್ಟಳು. ರಾಯರು ಸ್ವಾಗತಿಸಿ ದರು. ಅವರು ಎಣಿಸಿದ ಮೂರ್ತಿಯಂತೆ ಕೋಮಲೆಯನ್ನು ಕಂಡಾಗ ಹರ್ಷವಾಗಲಿಲ್ಲ.

ಮಿಂದ ಕೆಂಡದ ಬಣ್ಣ, ತುಂಬಾ ಬಳೆದ ದೇಹ, ಗುಜ್ಜು ಸ್ವರೂಪ. ಇಂತಹಳು ಒಳಬರುತ್ತಲೇ ರಾಯರಿಗೆ ತನ್ನನ್ನು ನುಂಗ ಬಂದ ರೂಪಿ ನಂತೆ ಹೊಳೆಯ ಹತ್ತಿತು. ಅವರ ಉತ್ಸಾಹವೆಲ್ಲಾ ನೀರಲ್ಲಿ ಮಾಡಿದ ಹೋಮದಂತಾಯಿತು. ಯಾವ ಆಕಾಶಗೋಪುರವನ್ನು ಕಟ್ಟಿದ್ದರೋ ಅದಿಂದು ದುಃಖದ ಬೀಡಾಗಿ ಕಂಡರು. ಮಾತನಾಡಬೇಕೆಂದು ತೋರ ಲಿಲ್ಲ. ಮೆನೇಜರರ ಕೆಲಸವೆಂಬುದು ಯಾರಿಗೆ ಬೇಕು, ಎರಡು ದಿನ ದಿಂದ ಆರಾಮವಿಲ್ಲ, ದೇಹ ನೆಟ್ಟಗಿಲ್ಲ, ತಲೆ ಸಿಡಿಯುತ್ತಿದೆ, ಏನಾಗಬೇ ಕೆಂದು ಕೇಳಿದರು.

ಕೋಮಲೆಯ ಹತ್ತಿರ ಒಂದೆರಡು ಪತ್ರಿಕೆಗಳಿದ್ದುವು. ಅವುಗಳನ್ನು ಮೇಜಿನಲ್ಲಿರಿಸಿ ಆರಾಮಾಸನದಲ್ಲಿ ಕುಳ್ಳಿರಹತ್ತಿದಳು. ಕೂತುಕೊಳ್ಳುತ್ತಲೇ ರಾಯರಿಗೆ ಮನಸ್ಸಿನಲ್ಲಿ ಅಸಹ್ಯವಾಗತೊಡಗಿತು. ಮೃದುನುಡಿಯಿಂದ ಹೇಳಿದಳು. ತಮ್ಮ ಆರೋಗ್ಯ ಸರಿಯಾಗುವ ತನಕ ನಾನಿಲ್ಲಿರುವೆ; ಕಾಣುತ್ತಿರುವೆ ಎಂದಳು. ಇದನ್ನು ಕೇಳುತ್ತಲೇ ರಾಯರಿಗೆ ಸಿಡಿಲು ಬಡಿದಂತಾಯಿತು. ಯಾವ ಅಗತ್ಯವೂ ಇಲ್ಲ; ಕೆಲಸವಾಗಿ ಹೋಗಿದೆಯೆಂದರು. ಕೋಮಲೆಯು ನಿರಾಶೆಯನ್ನು ಪ್ರಕಟಿಸಿ ನಮಸ್ತೇ ಎಂದಳು. ರಾಯರಿಗೆ, ಕೋಣೆಯಿಂದ ಹೆಚ್ಚು ಮಾತಾಡದೆ ಹೋದರೆ ಸಾಕೆಂದಾಗಿತ್ತು. ಕೋಮಲೆ ನಡೆದಳು, ಕೂಡಲೇ ರಾಯರು ಗುಮಾಸ್ತರನ್ನು ಕರೆದರು. ಕೋಮಲೆಗೆ ಓರ್ಡರು ಕೊಡುವುದಿಲ್ಲ. ಟೈಪು ಮಾಡಬೇಡ ಎಂದು ಮುಂದೆ ಹೇಳಿದರು; ಗುಮಾಸ್ತ—'ಟೈಪು ಮಾಡಿ ತಯಾರು ಮಾಡಿರುವೆ' ಎಂದ. ರಾಯರು ಅದನ್ನು ಹರಿದು ಬಿಡೆಂದರು.

ಪ್ರಭಾತ, 20-2-1945

# ಕುಂಞಾಲಿ ಸತ್ತ





"ಸೈಯದ್ ಇಸ್ಮಾಯಿಲನೂ ಇಲ್ಲ. ಫಕೀರ ಮಹಮ್ಮದನೂ ಕಾಣೆ. ಹೊತ್ತಾರೆಯೇ ಹೆಂಡತಿ ಮಕ್ಕಳೊಂದಿಗೆ ಅವರು ತಮ್ಮೂರಿಗೆ ಹಿಂದಿರುಗಿರುವರು" ಎಂಬ ಈ ಮಾತು ರೈಲ್ವೇ ಸ್ಟೇಶನಿನಲ್ಲಿ ತಂಗಿದ್ದ ಮುಸಲ್ಮಾನರೆಲ್ಲರ ಬಾಯಿಯಿಂದ ಹೊರಬರುತಿತ್ತು. ಇದೆಂತಹ ವಾರ್ತೆಯೆಂದು ಪ್ರತಿಯೊಬ್ಬನಿಗೂ ತಿಳಿಯುವ ಹಂಬಲು.

ನಮ್ಮ ನಗರದ ಹೊರಗೆ ಮುಟ್ಟತ್ತೋಡು ಎಂಬುದು ಒಂದು ಕಿರಿಯ ಮುಸಲ್ಮಾನರ ಬಸ್ತಿ. ಅಲ್ಲಿ ಅವರ ಸಂಖ್ಯೆ ಐನೂರು. ಈ ಬಸ್ತಿಗಳ ನೆಲೆ ಅತಿ ವಿಚಿತ್ರ. ಹರಕು ಮುರುಕು ಹುಲ್ಲು ಚಾವಣಿಯ ಮನೆಗಳು. ಸುತ್ತಾ ಹರಿಯುವ ಕೊಳೆಯ ಚರಂಡಿ. ಮನೆಯ ಎದುರು ಹಿಂದು ಮುಂದು ಎಲ್ಲಿಡೆಯಲ್ಲೂ ಚೆಲ್ಲಿದ ಕೊಳೆ. ಕಿರಿಯರ ಹಿರಿಯರ ಕೋಳಿ, ಆಡುಗಳೆಲ್ಲವುಗಳ ಮಲಮೂತ್ರ. ಎಲ್ಲಾ ಮನೆಯೊಳಗೆ ಕತ್ತಲೆ. ಸೂರ್ಯನ ರಶ್ಮಿ ಬೀಳದು. ಇಣಿಕಿ ನೋಡುವಲ್ಲಿ ಬಿದಿರಿನ ಶಲಾಕೆಯ ಪರದೆ. ಬಿಸಿಲಿಗೊಣಗಿದರೆ ವಾಸನೆ ಇಲ್ಲ. ಅಲ್ಪ ಮಳೆ ಬಂದು ನೆನೆದರೆ ತೊಳೆದು ಹೋಗದಿದ್ದರೆ ಅನ್ಯರಿಗೆ ಅದೊಂದು ನರಕಗರ್ತದ ಸ್ಥಾನ. ಅಲ್ಲಿನ ಮುಸಲಿಮರು ಹಳ್ಳಿಗೆ ಹೋಗುವರು. ಬಾಳೆಕಾಯಿ, ತೆಂಗಿನಕಾಯಿ, ಹಣ್ಣಡಿಕೆ, ತರಕಾರಿ, ವೀಳ್ಯದೆಲೆಗಳನ್ನು ಹಳ್ಳಿಗಳಿಂದ ಕ್ರಯಕ್ಕೆ ಕೊಂಡು ನಗರಕ್ಕೆ ತಂದು ವಿಕ್ರಯಿಸುವರು. ಇನ್ನು ಕೆಲವರು ಬೀಡಾ ಬೀಡಿಯಂಗಡಿ, ಚಾದಂಗಡಿ ಇಟ್ಟಿರುವರು. ಇನ್ನು ಕೆಲವರು ಕಿರಾಣಿಯಂಗಡಿಯವರು. ಅದರೊಂದಿಗೆ ಒಣಮೀನ ವ್ಯಾಪಾರಿಗಳು. ಇನ್ನು ಕೆಲವರು ದೊಡ್ಡ ದಲಾಲಿ ಸಾಹುಕಾರರು. ಸೈಯದ್ ಇಸ್ಮಾಯಿಲ್ ಮತ್ತು ಪಕೀರ ಮಹಮ್ಮದರು ಕುಂಞಾಲಿಯ ಮಕ್ಕಳು. ಕುಂಞಾಲಿ ಮುಟ್ಟತ್ತೋಡಿನ ಪ್ರತಿಷ್ಠಿತ ವ್ಯಕ್ತಿ, ಮುದುಕ. ಗಡ್ಡ ಹಣ್ಣಾಗಿದೆ. ನೀಳವಾದ ಮೊಗದಲ್ಲಿ ತಲೆಕೆಳಗೆ ಮಂಡಲಾಕಾರವಾಗಿ ಹರಡಿರುವ ಬಿಳಿ ಗಡ್ಡದ ಕೂದಲು. ತಲೆಗೊಂದು ಟೊಪ್ಪಿ. ಕೆಳಕ್ಕೆ ಇಳಿದ ಕಣ್ಣು. ಸೊಟ್ಟಾದ ಮೂಗು. ಆರು

ಆಡಿ ಎತ್ತರದವನಾದರೂ ಹಣ್ಣಾದ ಮುದುಕ. ಬೆನ್ನು ಬಾಗಿದೆ. ಊರು ಗೋಲು ಭಾರವಾದ ದೇಹಕ್ಕೆ ಸಹಾಯ. ಜರೆಯಿಂದ ಜೋಲುವ ಹೊರ ಚರ್ಮ ನೆರಿಗಟ್ಟಿದೆ. ಎಡೆ ಎಡೆ ಕೆಮ್ಮುವನು. ಚುಟ್ಟಾ ಅವನ ಜೀವನ ಸಹಚರ. ಎಡೆಎಡೆ ಚುಟ್ಟಾ ಸೇದುವ. ಮತ್ತೆ ಹತ್ತು ನಿಮಿಷ ಕೆಮ್ಮುವ. ಕಫವನ್ನು ಉಗುಳುವ. ಇಂತಹ ಮುದುಕನ ಮಕ್ಕಳು ನೋಡಲು ಸಶಕ್ತರು. ದೀರ್ಘವಾದ ಶ್ಮಶ್ರುಗಳು. ಕೆಂಗಣ್ಣು. ಉಬ್ಬಿದ ಕೆನ್ನೆಯವರಿದ್ದು ಮಾತಾ ಡಿದರೆ ಗುಡುಗಿದಂತಾಗುತಿತ್ತು. ಉಡುಪು ತೊಟ್ಟು ನಿಂತರೆ ಶಟ್ಟೀರಾಯ ನಂತೆ ಎಲ್ಲರಿಗೂ ತೋರುವರು. ಮುಹಮ್ಮದೀಯರಿಷ್ಟಿದ್ದರೂ ಇಲ್ಲಿನ ಮಂದಿ ತೀರಾ ಅಶಿಕ್ಷಿತರು. ಲೆಕ್ಕ ವ್ಯವಹಾರ ವ್ಯಾಪಾರಕ್ಕೆ ಮಾತ್ರ. ಧರ್ಮ ಜಾತಿಯೆಂಬುದರಿಂದ ಅವರು ತೀರಾ ಅಂಧರು. ಜಾತಿಯ ಮತ್ತು ಧರ್ಮದ ವಿಚಾರದಲ್ಲಿ ವಿಚಾರಗೊಳ್ಳದೆ ಕೆಲಸಕ್ಕಿಳಿವುದು ಅವರ ಪರಮ ಕರ್ತವ್ಯದಲ್ಲಿ ಒಂದಾಗಿತ್ತು. ಮನುಷ್ಯರಿದ್ದು ಮನುಷ್ಯತೆಯನ್ನು ಕಾಣರು. ಜಾತಿಧರ್ಮಕ್ಕಾಗಿ ನೆತ್ತರನ್ನು ವಿವೇಕಹೀನತೆಯಿಂದಿಳಿಸುವವರು.

ಕುಂಞಾಲಿಯು ಇಂತಹ ಬಸ್ತಿಯವ. ಅವನ ಮಕ್ಕಳಿಗೆ ಮನು ಷ್ಯತೆಯಿಂದ ಹಿರಿದು ಧರ್ಮ. ಧರ್ಮದ ಹೆಸರಿಗಾಗಿ ಜೀವನವನ್ನು ಬಲಿಗೆಳೆಯಲು ಸದಾ ಸನ್ನದ್ಧರಿರುವರು. ಲೀಗಿನ ಪ್ರಚಾರಕರ್ತನು ಆ ಬಸ್ತಿಗೆ ಬರುವ ದಿನವನ್ನು ಇಸ್ಮಾಯಿಲ್ ಮತ್ತು ಫಕೀರ್ ಮಹಮ್ಮದ ರರಿತರು. ಕೂಡಲೇ ಅವರು ಹಸುರು ಬಟ್ಟೆಗಳನ್ನು ಹುಡುಕಿದರು. ಮನೆಮನೆಗಳಲ್ಲಿ ಹಸುರು ಬಾವುಟವನ್ನು ಅರ್ಧಚಂದ್ರಾಂಕಿತದಿಂದ ಬಿದಿರ ತುದಿಯಲ್ಲಿ ಹಾರುವಂತೆ ಮಾಡಿದರು. ತಮ್ಮ ಮನೆಯ ಅಂಗಣದಲ್ಲಿ ಸ್ವಾಗತಕ್ಕಿರುವ ಸನ್ನಾಹಗೊಳಿಸಿದರು. ಇರ್ವರೂ ಹೂಮಾಲಿಗಳನ್ನು ಹಿಡಿದು ನಿಂತರು. ಅಂಗಳದಲ್ಲಿ ಬಿಳೇ ಒಟ್ಟೆ ಹಾಸಿ ಅದರ ಮೇಲೆ ಸುಗಂಧದ್ರವ್ಯಗಳನ್ನಿರಿಸಿದರು. ಬಸ್ತಿಯ ಮುದುಕರು ವಿಚಿತ್ರತೆಗೊಂಡಿದ್ದರು. ಮಹಿಳೆಯರು ತಮ್ಮ ಜೀವನದ ಕಠಿಣತೆಯ ನೆಲೆಯನ್ನು ಹೋಗೊಳಿಸಲು ಬರುವ ಮಹಾಶಯನು ಉಪದೇಶವೀಯುವನು; ಪ್ರಯತ್ನಗೊಳಿಸುವನು, ಎಂಬ ವಿಚಾರಗೊಂಡಿದ್ದರು. ತರುಣರು ಹೊಸ ಹುರುಪಿನಿಂದ ನೆರೆದಿ ದ್ದರು. ಎಳೆ ಮಕ್ಕಳು ಕೌತುಕದಿಂದ ಅಲ್ಲಿ ಇಲ್ಲಿ ತಿರುಗಾಡಿ ಚಪ್ಪಾಳೆ

ಸೇಳು ಇಕ್ಕುತಿದ್ದರು. ಮುಂದಾಳು ಬಂದನು. ಹೂವಾಲೆಯನ್ನು ಅವನಿಗಿಕ್ಕಿದ್ದರು. ಪರಿಮಳ ದ್ರವ್ಯವನ್ನು ನೀಡಿ ಎಲ್ಲರೂ ಅಂಗಸ್ಪರ್ಶ ಹಾಗೂ ಸಲಾಮುಗೆಯ್ದರು. ಮುಂದಾಳು ಆಕಾಶವನ್ನು ಭೇದಿಸುವ ಗಂಭೀರ ನಿನಾದದಿಂದ ಹೇಳತೊಡಗಿದನು.

ಇಸ್ಲಾಮ್ ಪೂಜಕರೇ! ಹಿಂದುಸ್ತಾನದ ವಿಭಜನೆಯು ಆಗಿಯೇ ತೀರಬೇಕು; ಆಗಿಯೇ ತೀರುವುದು. ಕೂಡಲೇ ಎಲ್ಲರೂ ಪಾಕಿಸ್ತಾನಕ್ಕೆ ಹೋರಾಡುವೆವು. ಪಾಕಿಸ್ತಾನಗೊಂಡು ಸಾಯುವೆವು ಎಂದು ಘೋಷಿಸ ತೊಡಗಿದರು. ಆದರೆ ಈ ಘೋಷಣೆಯ ಅರ್ಥವೇನು ಎಂದು ಯಾರೂ ತಿಳಿದಿರಲಿಲ್ಲ. ಸೈಯದ್ ಇಸ್ಮಾಯಿಲ್ ಮತ್ತು ಫಕೀರ್ ಮಹಮ್ಮದರೂ ಏನೆಂದು ಯೋಚಿಸಿರಲಿಲ್ಲ. ಇದರಿಂದ ಮುಂದಾಳುವು ಅದೊಮ್ಮೆ ಉತ್ಸಾಹ ಗೊಂಡು ಅತ್ಯುಚ್ಚ ಸ್ವರದೊಡನೆ, ಕೈಯಿಂದ ಕುಳ್ಳಿರ ಸೂಚಿಸಿ ಹೇಳತೊಡ ಗಿದನು. ಕೂಡಲೇ ಜಿಂದಾಬಾದ್ ಎಂಬ ಶಬ್ದವು ಸರ್ವರಿಂದಲೂ ಹೊರ ಬಂದಿತು. ಲೀಗಿನ ಕಾರ್ಯಕರ್ತರು ಹುಂಕಾರಗೊಂಡರು. ಮನೆಯೊಳಗೆ ಮಂಚವೊಂದರಲ್ಲಿ ಕುಂಞಾಲಿಯು ಮಲಗಿದ್ದನು. ಅವನಿಗೆ ಲೀಗಿನ ಮುಂದಾಳು! ಹಿಂದುಗಳು ನಮ್ಮ ಪರಮ ಶತ್ರುಗಳು. ನಮ್ಮ ಧರ್ಮ ಹಾಗೂ ನಮ್ಮನ್ನು ನಾಶಗೊಳಿಸಲು ಯತ್ನಿಸುವ ದ್ರೋಹಿಗಳು. ಕಾಂಗ್ರೆಸ್ಸು ಹಿಂದುಗಳ ಸೃಷ್ಟಿ. ಕಾಂಗ್ರೆಸ್ಸು ಇಡೀ ಭಾರತದ ಒಡೆತನಗೊಂಡು ನಮ್ಮನ್ನು ಗುಲಾಮರಾಗಿ ಮಾಡಲು ಪ್ರಯತ್ನಿಸುತ್ತಿದೆ. ನಾವೆಂದೂ ಈ ಗುಲಾಮತನಕ್ಕೆ ಕಟ್ಟು ಬೀಳಲಾರೆವು ಎಂದು ಹೇಳುತ್ತಲೇ ಎಲ್ಲರೂ ಎಂದೂ ಕಟ್ಟು ಬೀಳಲಾರೆವೆಂದು ಘೋಷಿಸಿದರು.

ಮುಂದಾಳುವು ಮತ್ತೂ ಗಂಭೀರ ವಾಣಿಯಿಂದ ನುಡಿಯತೊಡಗಿ ದನು.

ಈ ಹಿಂದುಗಳು ಕಾಫರರು, ನಾವು ಇವರ ಗತಿ ಮತ್ತು ಆಶೆ ಗಳನ್ನು ಬಲಾತ್ಕಾರದಿಂದ ನಾಶಗೊಳಿಸುವೆವು. ಕಾಯಿದೆ ಆಜಮ-ಜನಾಬ್ ಜಿನ್ನಾರು ಈ ತಂತ್ರವನ್ನರಿತು ಪಾಕಿಸ್ತಾನದ ಕೇಳಿಕೆಯನ್ನು ಕಾಂಗ್ರೆಸ್ಸಿನ ಮುಂದೆ ಇರಿಸಿರುವರು. ಎಲೈ! ನನ್ನ ಸಹೋದರರೇ ಮತ್ತು ಬಂಧು ಗಳೇ ನಾವು ನಮ್ಮ ಜೀವನವನ್ನು ಸವೆದು ಪಾಕಿಸ್ತಾನವನ್ನುಗೊಂಡರೆ

ನಾವು ನಮ್ಮ ಧರ್ಮರಕ್ಷಣೆಯನ್ನು ಮಾತ್ರವಲ್ಲ, ನಮ್ಮ ಮಕ್ಕಳು ಮರಿಗಳನ್ನು ಹಾಗೂ ಭಾವೀ ಸಂತಾನಗಳನ್ನು ರಕ್ಷಿಸಿದಂತಾಯಿತು. ನಮ್ಮ ಮಕ್ಕಳಿಗೆ ಪಾಕಿಸ್ತಾನದಲ್ಲಿ ಉಳಿಯಲು ಸ್ವತಂತ್ರವಾದ ಜಮೀನು ಸಿಗುವುದು. ಅದಲ್ಲದೆ ಅವರ ಶಿಕ್ಷಣ ಊಟ ಉಪಚಾರಗಳ ವ್ಯವಸ್ಥೆಯು ಅಲ್ಲಿ ಮಾಡಲಾಗುವುದು, ಮತ್ತು ಮಾಡಿದಂತಾಯಿತು. ನಮ್ಮ ಜೀವನದ ಸಮಸ್ಯೆಯು ಬದಲುಗೊಂಡು ಪ್ರಕಾಶಮಯವಾಗುವುದು. ನಮ್ಮದೇ ರಾಜ್ಯ, ನಮ್ಮದೇ ಆಡಳಿತೆ. ಕಾಫರರ ಕಾಣುವಿಕೆಯಿರದ ನಮ್ಮ ಆ ರಾಜ್ಯವು ಜೀವನಸಂಗ್ರಾಮದಲ್ಲಿ ವೈಶಿಷ್ಟ್ಯ ಪೂರ್ಣವಾಗುವುದು.

ಮಂಚದಲ್ಲಿದ್ದ ಕುಂಞಾಲಿ ಈ ಎಲ್ಲಾ ಮಾತುಗಳನ್ನು ಕೇಳುತ್ತಲೇ ಅಲ್ಲಿಂದೆದ್ದು ಮುಂದಾಳಿಗೆದುರು ಬಂದು ನಿಂತನು. ಕೇಳಿದನು?

ಸಾಹೇಬರೇ! ಹಿಂದುಗಳು ನಮ್ಮ ಶತ್ರುಗಳೇ?

ಮುಂದಾಳುವು ಏನೂ ತಡೆಯಿಲ್ಲದೆ ಹೇಳಿದನು. ಓ ದೊಡ್ಡ ಅಜ್ಜರೇ ಇದಕ್ಕೇನು ಸಂದೇಹ. ಕಾಂಗ್ರೆಸ್ಸು ಮತ್ತು ಗಾಂಧಿಯವರು ನಮ್ಮನ್ನು ಅಳಿಸಿ ಬಿಡಲು ಸೊಂಟಕಟ್ಟಿ ನಿಂತಿದ್ದಾರೆ.

ಕೂಡಲೇ ಕುಂಞಾಲಿಯು ತನ್ನ ಊರುಗೋಲ ಸಹಾಯದಿಂದ ಸರಿ ನಿಂತು ಹೇಳಿದನು.

ತಾವು ಸ್ವತಃ ಅರಿವಿರದೆ ತಪ್ಪು ಭಾವನೆಗೆ ಒಳಗಾಗಿದ್ದೀರಿ. ತಾವು ನಮಗೆ ಯಾವ ಉಪದೇಶವನ್ನು ಹೇಳುವಿರೋ ಅದು ನಮಗೆ ಹಿತಕರವಾದುದಲ್ಲ. ತಿಳಿದುತಿಳಿದು ವಿನಾಶಕೂಪಕ್ಕೆ ತಳ್ಳುವ ವಿಜಯದ ಬಾವುಟವನ್ನು ತೋರಿಸಿದ ಪರಕೀಯರ ಪ್ರಯತ್ನವಿದು. ನನ್ನ ಅಜ್ಜ ಮುತ್ತಜ್ಜರನ್ನು ನಾನು ಕಣ್ಣಾರೆ ಕಂಡಿರುವೆ. ಅವರಿಂದ ಈ ಮಾತು ಕೇಳಬರಲಿಲ್ಲ. ನಾನು ತಮ್ಮೊಡನೆ ನಿವೇದಿಸುವುದೇನೆಂದರೆ ಇಂತಹ ಮಾತನ್ನು ಇಲ್ಲಿಗೆ ಬಂದು ಸಾರಬೇಡಿರಿ. ಅದು ನಮ್ಮ ಸಂತಾನದ ಹಿತಕ್ಕಾಗದು. ತಮ್ಮ ಕಲ್ಪನೆಯು ವಿಚಾರಶೂನ್ಯವಿದ್ದು ನಮ್ಮ ಜೀವನದಲ್ಲಿರುವ ಅನ್ಯೋನ್ಯ ಸಹಾನುಭೂತಿಯನ್ನು ಕಡಿದಿಕ್ಕುವುದು. ಮಾನವ ಸಹಾನುಭೂತಿಯನ್ನು ಬಿಟ್ಟರೆ ಅದು ಮನುಷ್ಯತೆಯಲ್ಲ, ಎಂದು ಹೇಳುತ್ತಾ ಕುಂಞಾಲಿಯು

ಕೆಮ್ಮುಗೊಂಡನು, ಕಫ ಬಂದಿತು. ಆ ಬಸ್ತಿಯ ಹಳಬರು ಒಂದಾದರು. ಕುಂಞಾಲಿಯನ್ನು ಮನೆಯೊಳಕ್ಕೆ ಕೈಹಿಡಿದು ಕೊಂಡೋದರು.

ಸೈಯದ್—ಇಸ್ಮಾಯಿಲ್ ಮತ್ತು ಫಕೀರ ಮಹಮ್ಮದರು ತಂದೆಯ ಅಪಮಾನಜನಕ ಮಾತನ್ನು ಕೇಳಿ ತಲೆ ಕೆಳಬಾಗಿಸಿ ನಿಂತಿದ್ದರು. ಮುಂದಾಳುವು ಹುಸಿ ನಗುಗೊಂಡು ಅವರಿಬ್ಬರ ಬೆನ್ನೊರಸಿ ಹೇಳಿದನು. "ಇಸ್ಮಾಯಿಲ್, ಮೊದಲೇ ನಾನು ನಿಮಗೆ ತಿಳಿಸಿದ್ದೆನಲ್ಲವೇ ಜನರೊಡನೆ ಹೇಳಿ ಲೀಗಿನ ಮಾರ್ಗದಲ್ಲಿ ನಡೆಯುವಂತೆ ಮಾಡಬೇಕೆಂದು."

ಇಸ್ಮಾಯಿಲನು ಅದಕ್ಕೆ ಬಸದಿಯ ಎಲ್ಲಾ ತರುಣರು ನಮ್ಮೊಂದಿಗಿರುವರು. ಹಳೇ ಮನುಷ್ಯರ ತಲೆಗೆ ನಮ್ಮ ಮಾತು ಹಿಡಿಯುವುದಿಲ್ಲ. ನಮ್ಮಪ್ಪನವರ ಮಾತಿನ ವಿಷಯದಲ್ಲಿ ನಾನು ಮಾಫಿ ಕೇಳಿಕೊಳ್ಳುತ್ತೇನೆ.

ಜಯಘೋಷಣೆಯು ಗಟ್ಟಿಯಾಗ ತೊಡಗಿತು. ಎಲ್ಲರೂ ಬಲವಾಗಿ ಕೂಗ ತೊಡಗಿದರು. ಮುಂದಾಳುವು ಒಂದು ಮಾತನ್ನು ಹೇಳುವನು. ಅದನ್ನು ಎಲ್ಲಾ ತರುಣರು ಒಂದಾಗಿ ಹೇಳ ತೊಡಗಿದರು. ಅವುಗಳೆಲ್ಲಾ ಸೈನಿಕರ ಪ್ರತಿಜ್ಞಾವಾಕ್ಯಗಳಂತಿದ್ದುವು.

ಈ ರೀತಿಯ ಘಟನೆ ಕಳೆದು ನಾಲ್ಕು ವರುಷಗಳುರುಳಿದವು. ಈ ಕಾಲದಲ್ಲಿ ಈ ಬಸದಿಯಲ್ಲಿ ಅತ್ಯಂತ ಮಹತ್ವ ಪೂರ್ಣವಾದ ಘಟನೆಗಳು ಉಂಟಾಗಿದ್ದುವು. ಅಂದಿನಿಂದ ಇಸ್ಮಾಯಿಲ್ ಮತ್ತು ಮಹಮ್ಮದ ಇವರಿಬ್ಬರು ಮನೆಮನೆಗೆ ಹೋಗಿ ಹಿಂದುಗಳು ನಮ್ಮನ್ನು ಹಾಳು ಮಾಡಲೆತ್ನಿಸುವರೆಂಬ ಪ್ರಚಾರಕಾರ್ಯವನ್ನು ದಿನೇ ದಿನೇ ವಿಷದಗೊಳಿಸಿದರು. ಮುಸಲ್ಮಾನರು ಈ ವಿಪತ್ತಿಯ ಘಂಟಾನಾದ ಘೋಷಣೆಯಿಂದ ಅಲ್ಪ ಎಚ್ಚರಗೊಂಡರು. ಅಲ್ಲಿ ಒಂದು ವ್ಯಾಯಾಮ ಶಾಲೆಯಾಯಿತು. ದೇಹದ ಬಳೆಸುವಿಕೆಯ ವಿಧಾನಕಾರ್ಯಕ್ರಮ ಮೊದಲುಗೊಂಡು ಲಾಟಿ ಬೀಸುವಿಕೆಗಾರಂಭವಾಯಿತು. ಇದರಿಂದ ನವತರುಣರಲ್ಲಿ ಒಂದು ಉತ್ಸಾಹ ತುಂಬಿತು. ಹೃದಯದಲ್ಲಿ ಆವೇಶದ ಪಿಶಾಚಿಯು ನೆಲೆಗೊಂಡಂತಾಯಿತು. ಲಾಟಿಯ ನಂತರ ಕತ್ತಿ. ಕತ್ತಿಯ ನಂತರ ಖಡ್ಗ. ಮೊದಲಾದುವುಗಳ ಶಿಕ್ಷಣವಾಯಿತು. ಇದಕ್ಕೆಲ್ಲಾ ಕುಂಞಾಲಿಯ ಮಕ್ಕಳೇ ಉಸ್ತಾದರಿ

ದ್ದರು ಖಲೀಫರೆಂಬ ಬಿರುದು ನವತರುಣರಿಂದ ಇವರಿಬ್ಬರಿಗೆ ದತ್ತ ವಾಯಿತು.

ಈ ಖಲೀಪರು ದಿನೇ ದಿನೇ ಹಿಂದುಸ್ಥಾನದ ವಾರ್ತೆಯನ್ನು ತಮ್ಮ ಅನುಯಾಯಿಗಳಿಗೆ ಬೋಧಿಸತೊಡಗಿದರು. ಆ ವಾರ್ತೆಗಳು ಕಾಲ್ಪನಿಕ ವಿದ್ದು ಜನರಲ್ಲಿ ದ್ವೇಷವನ್ನು ಹೆಚ್ಚಿಸತೊಡಗಿದುವು. ತರುಣರು ಈ ವಾರ್ತೆಯ ಪ್ರಬಲ ಪ್ರಚಾರದ ಮೂಲಕ ತುಂಬಾ ಮತದ್ವೇಷಗೊಂಡು ಹತ್ಯಾಕಾಂಡದ ಉರಿಗಿರುವ ಚಂದಾಹಣವನ್ನು ಎಲ್ಲರಿಂದಲೂ ಶೇಖರಿಸ ತೊಡಗಿದರು.

ಒಂದು ದಿನ ಖಲೀಫ ಇಸ್ಮಾಯಿಲ್ ಬಂದು ತರುಣರೊಡನೆ ಹೇಳ ತೊಡಗಿದ. ಕಲ್ಕತ್ತೆಯಲ್ಲಿ ದಂಗೆ ಎದ್ದಿದೆ. ಕಾಫರರ ತಲೆ ಕೆಳಗಿಳಿಸ ಲಾಗಿದೆ. ಅವರ ಸಂಪತ್ತಿನ ಸುಲಿಗೆಯೊಂದಿಗೆ ಮನೆಮಾರುಗಳನ್ನು ನಷ್ಟ ಭ್ರಷ್ಟಗೊಳಿಸಲಾಗಿದೆ ಎಂದನು.

ಮತ್ತೊಂದು ದಿನ ಬಂದು ತರುಣರ ಮುಂದೆ ಹೇಳತೊಡಗಿದನು. ಕಾಯದೆ ಆಜಮ ಜಿನ್ನರಿಂದ ಡೈರೆಕ್ಟ್ ಏಕ್ಷನ್ನು ಸಾರಲಾಗಿದೆ. ನೌಖಾಲಿ ಯಲ್ಲಿ ತುಂಬಾ ಗೆಲವೊದಗಿದೆ. ಅಸಂಖ್ಯಾತ ಹಿಂದುಗಳ ಮತಪರಿವರ್ತನೆ ಯಾಗಿದೆ. ಕುರಾನನ್ನು ಓದಿಸಿ ಮುಸಲೀಮರಾಗಿ ಮಾಡಿಸಲಾಗಿದೆ. ಯಾರು ಇದಕ್ಕೆ ಸಮ್ಮತಿಸದೆ ವಿರುದ್ಧವಾದರೋ ಅವರ ತಲೆಯನ್ನು ನೆಲ ಕ್ಕುರುಳಿಸಲಾಯಿತು. ಹಿಂದುಗಳ ಚೆಲುವಾದ ಹೆಣ್ಣುಮಕ್ಕಳು ನಮ್ಮೊಂ ದಿಗೆ ಸೇರಿರುವರು. ಗೆಳೆಯರೇ ನಾವಿಲ್ಲಿ ಸುಮ್ಮನಿರುವುದು ಯುಕ್ತವಲ್ಲ, ಎಂದು ಹೇಳುತ್ತಲೇ ಅಬ್ದುಲ್ಲ ಮುಂದೆ ಬಂದ. ನಾವು ಯಾವುದನ್ನು ಮಾಡಬೇಕು, ಆಜ್ಞಾಪಿಸಬೇಕು ಎಂದ.

"ಕತ್ತಲೆಯ ಹೊತ್ತು ಬೆಳಕಿರದ ಗಲ್ಲಿಯಲ್ಲಿ ಅಡಗಿದ್ದು ಹಿಂದುಗಳ ಮೇಲೆ ಬೀಳಿರಿ. ಹೊಡೆಯಿರಿ."

ಖಲೀಫ ಇಸ್ಮಾಯಿಲನ ಈ ಮಾತು ಬಂದ ಮಾರನೆಯ ದಿನವೇ ಗಲ್ಲಿಗಲ್ಲಿಯಲ್ಲಿ ಸುದ್ದಿ. "ಹಳ್ಳಿಯ ಮುದುಕಿಯೊಬ್ಬಳಿಗೆ ಪೆಟ್ಟು. ಮುದುಕ ನೊಬ್ಬನ ಕಾಲು ಮುರಿಯಲಾಗಿದೆ. ನಗರದ ಗಲ್ಲಿಯಲ್ಲಿ ಕೆಲವೆಡೆ ಹಿಂದೂ ಅನಾಥೆಯರಿಗೂ ಅನಾಥರಿಗೂ ಶಿವಿತ."

ಈ ಸುದ್ದಿ ಕೇಳ ಬಂದಂತೆ ದಿನೇ ದಿನೇ ಪುಂಡರ ಅತಿಕ್ರಮಣವು ಹೆಚ್ಚಿತು. ನಗರದ ವ್ಯಾಪಾರಸ್ಥರು ದಿಗಿಲುಗೊಳ್ಳತೊಡಗಿದರು. ಅದೋ ಕೇಳಬರುತ್ತಿತ್ತು. ಯುವಕನೊಬ್ಬನ ಹತ್ಯೆ, ದೇಹವು ಗಾಯಪೂರ್ಣ ವಾಗಿದೆ. ನೋಡಿದರೆ ಹಿಂದುವೆಂದು ತೋರಬರುತ್ತಿದೆ. ಭಿಕಾರಿ ಹೆಂಗ ಸಿನ ಮೇಲೆ ಅತ್ಯಾಚಾರ. ಈ ಸುದ್ದಿ ಅಲ್ಲಲ್ಲಿ ಹರಡುತ್ತಲೇ ನಗರದ ಅಲ್ಪ ಸಂಖ್ಯಾಕರಲ್ಲೂ ಒಂದು ತರಹದ ಉದ್ವೇಗ ಹುಟ್ಟತೊಡಗಿತು. ಉದ್ವೇಗ ಗೊಂಡರೇನು. ಧರ್ಮದ ಕುರುಡುತನವು ಮನುಷ್ಯನನ್ನು ಆಸುರೀ ವೃತ್ತಿಗೆ ತಳ್ಳುತ್ತಿದೆ. ಅಲ್ಲಿ ಇಲ್ಲಿ ಹಳ್ಳಿಯಲ್ಲೂ ಈ ಪುಂಡರ ಅತ್ಯಾಚಾರವಾಯಿತು.

ಹಳೇ ಮುಸ್ಲಿಮ ಬಾಂಧವರು ಇದನ್ನು ಕೇಳಿ ಪಶ್ಚಾತ್ತಾಪಗೊಳ್ಳು ತ್ತಿದ್ದರು. ಅವರಲ್ಲಿ ಮಾನವನ ಹೃದಯವಿದ್ದಿತು. ಅವರೇನು ಮಾಡು ವರು. ಅವರ ಉಪದೇಶ ಕಿರಿಯರಿಗೆ ಒಗ್ಗದು. ಪುಂಡಾಟಿಕೆ ಹೆಚ್ಚಿತು. ಹಲವಾರು ದೊಡ್ಡ ಮನುಷ್ಯರಿಗೆ ಪೆಟ್ಟು ಬಿದ್ದಿತು. ಗಾಯಗಳಾದುವು, ಕೊಲೆಗಳಾದುವು. ದಿನ ದಿನ ಗಲ್ಲಿ ಗಲ್ಲಿಗಳಲ್ಲಿ ಹೆಣಗಳೂ ಗಾಯಗೊಂಡ ವರೂ ಕಾಣ ತೊಡಗಿದರು. ಇದರಿಂದ ಇದು ಜಾತೀಯ ದಂಗೆಯೆಂದು ಹಿಂದುಗಳು ಕಣ್ತೆರೆದರು. ಅಕ್ಕ ತಂಗಿಯರ ಅಣ್ಣ ತಮ್ಮಂದಿರ ಕೊಲೆ ಹಾಗೂ ತಿವಿತದ ಮೂಲಕ ಹಿಂದುಗಳಲ್ಲಿ ಹಲವರೊಂದಾದರು. ಇನು ಸುಮ್ಮನಿದ್ದರೆ ಪತ್ತೆಯಾಗದೆಂದು ಒಂದೆರಡು ಮುಸ್ಲಿಮರನ್ನು ಬಡಿದರು. ಗಾಯಗೊಳಿಸಿದರು. ಈ ಸುದ್ದಿ ಮುಟ್ಟಕ್ರೋಡಿ ಬಸ್ತಿಗಳಲ್ಲಿ ಹರ ಡಿತು. ಹಿಂದು ಮುಸ್ಲಿಮರು ಕೈಕೈ ಮಾಡತೊಡಗಿದರು. ನಗರದ ಅಲ್ಪ ಸಂಖ್ಯಾಕ ಮುಸಲ್ಮಾನರನ್ನು ಹಲವೆಡೆ ಕೊಂದರು. ಇದರಿಂದ ನಿರಪರಾಧಿ ಗಳಾದ ಹೆಂಗಸರೂ ಮಕ್ಕಳೂ ಆಹುತಿಗೊಂಡರು. ನಗರದ ಮುಸಲ್ಮಾನರ ಮನೆಗಳು ಈ ನೆಲೆಗೊಂಡ ಸುದ್ದಿ ಮುಟ್ಟಕ್ರೋಡಿಯ ಬಸದಿಗಳಲ್ಲೆಲ್ಲಾ ತುಂಬಿತು. ಅದಲ್ಲದೆ ಅಲ್ಲಲ್ಲಿನ ಮುಸಲ್ಮಾನರ ಬೀಡು ಬೆಂಕಿಗೆ ಆಹುತಿ ಯಾದುದು ಕೇಳಬಂದಿತು. ಸಂಖ್ಯೆಯಿಂದ ಕಡಮೆಯವರಾದ ಮುಟ್ಟ ಕ್ರೋಡಿಯ ಮುಸಲ್ಮಾನರಿಗೆ ಇದರಿಂದ ಭಯವು ಹೆಚ್ಚತೊಡಗಿತು. ನಗ ರಕ್ಕೆ ಹೋಗಲು ಹಿಂಜರಿಯತೊಡಗಿದರು. ಹಗಲು ಮನೆ ನುಗ್ಗಿ ಬಹಿರಂಗ ವಾಗಿ ಕಿರಿಯರ ಹಿರಿಯರ ಹೆಣ್ಣು ಮಕ್ಕಳ ಸೂರೆ ಸುಲಿಗೆಯೊಂದಿಗೆ ಕೊಲೆ

ಗಳಾದ ಸುದ್ದಿ ಖಲೀಫರಿಬ್ಬರ ಕಿವಿಗೂ ಮುಟ್ಟಿತು. ಇನ್ನು ನಮ್ಮ ಅವಸ್ಥೆ ಯೇನೆಂದು ಚಿಂತಿಸಲಾಗಿ ರಾತ್ರಿ ಸಭೆಗೂಡುವ ನಿರ್ಣಯಗೊಂಡರು.

ಮಧ್ಯರಾತ್ರಿಯ ಹೊತ್ತು, ಖಲೀಫ ಇಸ್ಮಾಯಿಲ ಮತ್ತು ಫಕೀರ ಮಹಮ್ಮದರಿಬ್ಬರು ಸಭೆ ಮುಂದೆ ನಿಂತು, ಸಹೋದರರೇ! ಬಂಧುಗಳೇ! ಇಂದು ನಮ್ಮ ಜಾತೀಯ ಪ್ರಶ್ನೆ ಇದೆ. ಇದು ಆತ್ಮಸಂರಕ್ಷಣೆಯ ಪ್ರಶ್ನೆ. ಹಿಂದುಗಳ ವಶವರ್ತಿಗಳಾಗಿ ನಾವುಳಿವುದು ನಮ್ಮ ಮತಕ್ಕೆ ಸಲ್ಲುವುದಿಲ್ಲ. ನಮ್ಮ ಧರ್ಮವು ಕಾಫರರನ್ನು ದ್ವೇಷಿಸುತ್ತಿರುವುದು. ಹಿಂದುಗಳನ್ನು ದಂಡಿಸ ಬೇಕಾದರೆ ನಮ್ಮ ಕರ್ತವ್ಯವಿನ್ನೂ ಇದೆ. ಕಡಿಮೆ ಸಂಖ್ಯೆಯ ವರಾದ ನಾವು ಈ ಸ್ಥಾನವನ್ನು ಬಿಟ್ಟು ನಮ್ಮ ಆಳಿಕೆಯುಳ್ಳ ನೆಲೆಗಳನ್ನು ಸೇರಬೇಕಾಗಿದೆ. ಅದಕ್ಕೆ ನಾವೀಬಸದಿಗಳನ್ನು ಬಿಟ್ಟು ನಾಳೆಯಿಂದ ಒಂದಾಗಿ ರೈಲ್ವೆಸ್ಟೇಷನಿಗೆ ಹೋಗಿ ಸೇರಬೇಕು. ಎಲ್ಲರನ್ನೂ ಈ ವಿಷಯ ದಲ್ಲಿ ಎಚ್ಚರಿಸುವುದು. ಹೆಂಗಸರು ಮಕ್ಕಳನ್ನು ನಮ್ಮ ಸಾಮಾನು ಗಳೊಂದಿಗೆ ಹೊರಡಲು ಅಣಿಯಾಗುವಂತೆ ಮಾಡುವುದು. ಇದರಿಂದ ಹಿಂದುಗಳಿಗೆ ಅಪಮಾನ. ಒಂದಾಗಿ ಹೋಗುತ್ತಿರುವ ನಮ್ಮನ್ನು ಅವರು ಕಂಡು ಅನ್ಯರೆದುರು ಹಾಸ್ಯಾಸ್ಪದರು ಮಾತ್ರವಲ್ಲ, ಅಪಮಾನಕ್ಕೆ ಈಡಾ ಗುವರು. ನಮ್ಮ ಸತ್ವವನ್ನು ಇದರಿಂದ ಪ್ರಕಟಿಸಿದಂತಾಗುವುದು. ಎಂದರು.

ಮರುದಿನ ರೈಲ್ವೇಸ್ಟೇಶನಿನಲ್ಲಿ ಹೇಳುವುದೇನು. ಗಾಡಿಯ ಹಿಂದೆ ಗಾಡಿಯೇ ಗಾಡಿಗಳು. ಸಾಮಾನುಗಳೊಂದಿಗೆ ಹೆಂಗಸರೂ ಮಕ್ಕಳೂ ಇಳಿಯುವರು. ಮುಟ್ಟಿತ್ತೋಡಿಯ ಮನೆಗಳಿಗೆಲ್ಲಾ ಹೆಚ್ಚಾಗಿ ಬೀಗ ಮುದ್ರೆ. ಖಲೀಫರ ಆಜ್ಞೆಗೆ ಕೆಲವರು ಕಿವಿಗೊಡದೆ ಅಲ್ಲೇ ಉಳಿದರು. ಕುಂಞಾಲಿಯು ತನ್ನ ಮಕ್ಕಳ ಕೇಳಿಕೆಗೆ ಬಾಗಲಿಲ್ಲ. ಒತ್ತಾಯಿಸಿದರು. ಅವನು ನನ್ನ ಹುಟ್ಟುಮನೆ ಸ್ವರ್ಗಕ್ಕಿಂತ ಹಿರಿದು. ಅಲ್ಲಾ ನನ್ನನ್ನು ಈ ಸ್ವರ್ಗದಲ್ಲಿ ಮೆರೆಯುವಂತೆ ಮಾಡಲಿ ಎಂದ. ಇಂತೆಯೇ ಹಲವು ಮುದುಕರು ತರುಣರ ಉಪದೇಶಕ್ಕೆ ಕಿವಿಗೊಡದೆ ಉಳಿದರು. ಆದರಿಂದ ತರುಣರು ನಿರಾಶರಾಗಲಿಲ್ಲ. ಸಾಲಾಗಿ ರೈಲ್ವೇಸ್ಟೇಶನಿಗೆ ಬಂದು ಸೇರು ತಿದ್ದಾರೆ. ದಿನ ಒಂದಾಯಿತು; ಎರಡಾಯಿತು; ಘೋಷೆಯ ಹೆಂಗಸ

ರಿಗೆ ಮಕ್ಕಳಿಗೆ ಮಲಮೂತ್ರದ ವಿಷಯದಲ್ಲಿ ಕಠಿಣವಾಯಿತು. ಎಲ್ಲಿಗೆ ಪಯಣ. ಆವ ಉದ್ದೇಶ ಒಂದೂ ತಿಳಿದಿಲ್ಲ. ಎರಡನೆಯ ದಿನ ಕಳೆಯಿತು. ಮೂರನೆಯ ದಿನವೂ ಜನ ಬರುತ್ತಿದೆ. ಸಾಮಾನುಗಳು ಇಳಿಯುತ್ತವೆ. ಮೂರನೆ ರಾತ್ರಿ ಖಲೀಫರಿಬ್ಬರಿಗೂ ಯೋಚನೆ ಹತ್ತಿತು. ಮನೆಯಲ್ಲಿರುವ ತಂದೆಯನ್ನು ಕಾಣಹೋದರು. ನೋಡುವುದೇನು? ಕುಂಞಾಲಿ ಮಲಗಿದಲ್ಲಿದ್ದಾನೆ. ಅವನ ಸ್ಥಿತಿ ಕಠಿಣವಾಗಿದೆ. ಎರಡುದಿನಪಿಡೀ ಆಹಾರವಿಲ್ಲ. ಪಾನೀಯವಿಲ್ಲ. ಮಂಚದಲ್ಲಿ. ಉಸಿರೆಳೆಯುತ್ತಿರುವನು. ಉಸಿರೆಳೆಯುವ ತಂದೆಯಲ್ಲಿಗೆ ಮಕ್ಕಳು ಬಂದರು. ತಂದೆಯ ದಯನೀಯತೆಯನ್ನು ಕಂಡು ಅಪ್ಪಾ ಹೊರಡೋಣ ಎಂದರು. ಎಲ್ಲಿಗೆ! ಎಂದು ಆತನ ಪ್ರಶ್ನೆ! ಅವರು ಅವಾಕ್ಕಾದರು. ಕೂಡಲೇ ಕುಂಞಾಲಿಯು ಉಸಿರುಗರೆಯುತ್ತಾ ಮಕ್ಕಳೇ ನೀವೇನು ಮಾಡಿದಿರಿ. ಧರ್ಮವು ನಿಮ್ಮನು, ಕೆಡಿಸಿತೇ. ಹಾಯ್! ಮನುಷ್ಯನು ಮಾನವತೆಯನ್ನು ಬಿಡುವುದೇ! ಧರ್ಮವು ಯಾರೊಡನೆಯೂ ಬಲಾತ್ಕರಿಸ ಹೊರಡುವುದಿಲ್ಲ. ಅದರಿಂದ ಧರ್ಮಾಭಿವೃದ್ಧಿಯಿಲ್ಲ. ಮಕ್ಕಳೇ! ನಿಮಗೆ ಇನ್ನೂ ಹೇಳುವೆ. ನೀವಿಂದು ಯಾವ ವರ್ತನೆಗೊಂಡಿರೋ ಅದು ಬಹಳ ಹಾನಿಕರವಾದುದು. ಧರ್ಮದ ಸೋಗಿನಿಂದ ಮೋಸ ಹೋಗಿರುವಿರಿ! ಮನುಷ್ಯನು ಮನುಷ್ಯನೊಡನೆ ಅನ್ಯಾಯ ವರ್ತನೆಗೊಳ್ಳುವಂತೆ ನಿಮ್ಮಿಂದ ಬೋಧಿಸಲಾಗಿದೆ. ಮನುಷ್ಯನು ಮನುಷ್ಯನನ್ನು ಕೊಲ್ಲುವ ಪಾಠವು ನಿಮ್ಮಿಂದ ಕಲಿಸಲಾಗಿದೆ. ಮನುಷ್ಯತೆಯನ್ನು ಹೃದಯದಿಂದ ದೂರಗೊಳಿಸುವ ಪ್ರಯತ್ನವು ನಿಮ್ಮಿಂದ ನಡೆದಿದೆ. ನೀವು ಮಾನವತೆಯ ಮಹಾಶತ್ರುಗಳು.

ಕುಂಞಾಲಿಯು ಹೇಳುತ್ತಾ ಹೇಳುತ್ತಾ ಕೆಮ್ಮ ತೊಡಗಿದ. ಮನುಷ್ಯತೆ ಧರ್ಮಕ್ಕಿಂತಲೂ ಹಿರಿದು. ಎಂದು ಮಾನವನ ಹೃದಯದಲ್ಲಿ ಮಾನವತೆಯಳಿವುದೊ ಅಂದು ತಾಯಿ ಇಲ್ಲ; ತಂದೆಯಿಲ್ಲ; ಹೆಂಡತಿ ಮಕ್ಕಳಿಲ್ಲ; ತಂದೆ ಮಗನನ್ನು ಮಗ ತಾಯಿಯನ್ನು ಅಣ್ಣ ತಮ್ಮನನ್ನು ಹೆಂಡತಿ ಗಂಡನನ್ನು ಕೊಲ್ಲುವುದಕ್ಕೆ ತೊಡಗುವರು. ನಾನು ಪ್ರಪಂಚದ ಮೂಕವ್ಯಕ್ತಿಯಲ್ಲ. ಅನುಭವದ ಸಿದ್ಧಾಂತ ಈ ಮಾತಿನಲ್ಲಿದೆ. ಯಾರು ಧರ್ಮದ ಮೂಲಕ ಹಿಂದುಗಳು ಮುಸ್ಲಿಮರ ಶತ್ರು

ಗಳೆನ್ನುವರೋ ಅವರು ಧರ್ಮದ ಜಾನುವಾರುಗಳು. ನೀವೇನು ಹುಚ್ಚರೇ! ಹೇಳಿರಿ! ಎನ್ನುವುದರೊಳಗೆ ಕೆಮ್ಮು ಬಂದಿತು. ಹೃದಯವು ಮತ್ತೊಮ್ಮೆ ಗುಡುಗಿತು. ಖಲೀಫರಿಬ್ಬರು ತಲೆ ಬಾಗಿ ಕುಳಿತಿರುವರು. ಅವರ ಹೃದಯವು ಇದು ಸತ್ಯವೇ ಎಂದು ಕೇಳುತ್ತಿದೆ. ಕುಂಞಾಲಿಯ ಹೃದಯ ವಾಯುವು ಸ್ತಬ್ಧಗೊಂಡಿತು. ಅವರೀರ್ವರೂ ಮೌನ ಸಾಕ್ಷಿಯಿಂದ ಕಣ್ಣೀರುಗರೆದು ಆತ್ಮಧಿಕ್ಕಾರ ಮಾಡುತಿದ್ದರು. ಮಾನವತೆಯನ್ನು ಅಳಿಸುವ ಯತ್ನಕ್ಕಿಳಿದಿರುವಿರೇ.......ಎಂದಿತ್ಯಾದಿಯಾಗಿ ಹೇಳಿದ ತಂದೆಯ ಮಾತುಗಳು ಕಿವಿಗೆ ಧ್ವನಿಸುತ್ತಿವೆ. ಕೈಯಿಂದ ಮೊಗವನ್ನು ಮುಚ್ಚಿಕೊಂಡರು. ಆ ಕಣ್ಣು ಕಾಣದ ಕತ್ತಲೆಯಲ್ಲಿ ಅವರ ಹೃದಯದಲ್ಲಿ ಮಾನವೀ ಶಕ್ತಿಯು ಪ್ರೇರಣೆಯಾಯಿತು. ಹೃದಯದ ಆಸುರೀ ಪ್ರೇರಣೆಯ ಸರ್ವ ನಾಶದ ನೆಲೆಯನ್ನು ಕಂಡುಕೊಂಡರು. ತಂದೆಯ ಮರಣಕಾಲದ ಸಂದೇಶವು ಅಪರನ್ನು ಎಚ್ಚರಿಸಿ ಹೆಂಡತಿ ಮಕ್ಕಳನ್ನು ಕರತರುವ ಪ್ರೇರಣೆಗೊಳಿಸಿತು. ಇಸ್ಮಾಯಿಲನು ಹೋದನು. ಬೆಳಗಾಗುವುದರ ಮೊದಲು ತಮ್ಮ ನಿವಾಸಸ್ಥಾನದಲ್ಲಿ ಬಂದು ಸೇರುವ ಅನುಕೂಲತೆಗೊಂಡರು. ಉಳಿದವರಿಗೆ ಇವರ ಪತ್ತೆ ಹತ್ತದಾಯಿತು. ಮುಖ ತೋರಿಸುವ ಶಕ್ತಿ ಇಲ್ಲದಾಯಿತು.

ತಾ. 20-9-1946



# ಕುಟ್ಟಿ ದೊಣ್ಣೆ

ಈ ಹೆಸರನ್ನು ಕೇಳಿದರೆ ಹಲವರಿಗೆ ಜುಗುಪ್ಸೆಯಾಗಬಹುದು; ಆ ಜುಗುಪ್ಸೆಯ ಭಾವನೆಯು ಪಾಶ್ಚಾತ್ಯ ನಾಗರಿಕತೆಯ ಅಭಿಮಾನಿಗಳಿಗೆ ಮತ್ತೂ ಹೆಚ್ಚಿರಬಹುದು. ಇದೊಂದು ಭಾರತೀಯರ ಹಳ್ಳಿಗರ ಆಟ. ಈ ಆಟವು ಅವರಲ್ಲಿ ಇಂದೂ ಇದೆ. ಹಳ್ಳಿಯ ಗೋವಳರು ದನಕಾಯು ತ್ತಿರುವ ಹೊತ್ತು ಇದೇ ಆಟವನ್ನು ಆಡುತ್ತಾರೆ. ಅವರ ಸಮಯ ಆವು ದೊಂದೂ ಬೇಸರವಿಲ್ಲದೆ ಇದರಿಂದ ಹೋಗಿಬಿಡುತ್ತದೆ. ಆಟದ ಸಾಮಾನು ಗಳು ಹೆಚ್ಚೇನೂ ಇಲ್ಲ; ಮರದ ಎರಡು ಗೆಲ್ಲಿನ ತುಂಡುಗಳು. ಕೈಯಲ್ಲಿ ಕತ್ತಿಯನ್ನು ಹೇಗೂ ಹಳ್ಳಿಗರು ಹಿಡಿಯದಿಲ್ಲ. ಅದೇ ಕತ್ತಿಯಿಂದ ಆಟದ ಉಪಕರಣವನ್ನು ತಯಾರಿಸಿ ಬಿಡುವರು. ಒಂದು ಕುಟ್ಟಿ, ಇನ್ನೊಂದು ದೊಣ್ಣೆ. ಇದಕ್ಕೇ "ಕುಟ್ಟಿದಾಣೆ"ಯೆಂದು ಹೇಳುವುದೂ ಉಂಟು. ಆಟದ ಉಪಕರಣಕ್ಕಾಗಿ ಅವರು ಧನವನ್ನು ವ್ಯಯಿಸುವುದಿಲ್ಲ. ಕಾಡಿನ ಮರಗಳಿಂದಲೇ ನಡೆದುಬಿಡುತ್ತದೆ. ಆಡುವರು. ಪಾಶ್ಚಾತ್ಯರ ಆಟದಲ್ಲಿ ತುಂಬಾ ದೋಷವಿದೆ. ಅವರ ಆಟದ ಉಪಕರಣಗಳಿಗೆ ತುಂಬಾ ಧನವ ವ್ಯಯವಾಗಬೇಕು. ಆಟದ ಉಪಕರಣಕ್ಕಾಗಿ ನಾವು ಹೆಚ್ಚು ವ್ಯಯ ಗೊಳಿಸಬಾರದು. ಭಾರತದ ಪರಿಸ್ಥಿತಿಯು ಅಂತಿದೆ. ಭಾರತದ ಸಂತಾನವು ಇದನ್ನು ತಿಳಿದಿದೆ. ಹಣವನ್ನು ನೀರು ಸುರಿಸಿದಂತೆ ಆಟಕ್ಕಾಗಿ ವ್ಯಯ ಮಾಡದಿದ್ದರೆ ನಮ್ಮ ಮಂದಿಗಳಿಗೆ ಒಂದಿಷ್ಟೂ ಸಂತೋಷವಿಲ್ಲ. ಶಾಲೆ ಗಳಲ್ಲಿ ಮಕ್ಕಳಿಂದ ಇದಕ್ಕಾಗಿ ಐದಾರು ರೂಪಾಯಿಗಳನ್ನು ವರ್ಷಕ್ಕೆ ವಸೂಲು ಮಾಡಿಬಿಡುವರು. ಪ್ರತಿಯೊಬ್ಬರೂ ತನ್ನ ಸಂಬಳದೊಂದಿಗೆ ಇದೊಂದು ಫೀಸನ್ನು ಕಟ್ಟಿಯೇ ತೀರಬೇಕು. ಭಾರತದ ಆಟಗಳು ಹಣವನ್ನು ಕೇಳಿಸುವವಲ್ಲ—ಅದಕ್ಕೆ ಹಣದ ಖರ್ಚು ಬೇಡ. ಪಾಶ್ಚಾತ್ಯರ ಆಟಗಳು ಹಣವಿದ್ದವನಿಗೆ ಮಾತ್ರ ಯೋಗ್ಯ. ಹಣವನ್ನು ವ್ಯಯಿಸದೆ ಅವರ ಆಟ ಆಗುವ ಹಾಗಿಲ್ಲ. ಬಡ ಹುಡುಗರಿಗೆ ಈ ವಿಚಾರವೇನು ಗೊತ್ತು? ಕುಟ್ಟಿ ಹೊಡೆಯುವಾಗ ಕಣ್ಣು ಹೋಗುವ ಅಪಾಯವಿದೆ;

ಮಕ್ಕಳು ಕುರುಡರಾಗಬೇಕಾಗುವುದು ಎಂದು ಹೇಳಬಹುದು. ಕ್ರಿಕೆಟ್ ಆಡುವಾಗ ತಲೆಯೊಡೆದು ಹೋಗುವ, ಕೈ ಮುರಿದು ಹೋಗುವ, ಕಾಲು ತುಂಡಾಗುವ ಅಪಾಯವಿಲ್ಲವೇ? ಎಂದು ಅವರೊಡನೆ ಕೇಳಬೇಕಾಗುವುದು. ಎಂತಿದ್ದರೂ ಕುಟ್ಟಿದೊಣ್ಣೆಯ ಆಟವು ಇಂದೂ ಗ್ರಾಮೀಣರಲ್ಲಿದೆ. ಗ್ರಾಮೀಣರನ್ನು ನಿಂದಿಸುವಾಗ ನಾಗರಿಕರಿಗೆ ಸಂತೋಷ. ಅದೇ ಸಂತೋಷ ನಾಗರಿಕರನ್ನು ಹಳಿವಾಗ ಹಳ್ಳಿಗರಿಗೆ ಇದೆ. ಈ ಸಂತೋಷವಂತೂ ಅವರವರ ಮನೋಭಿಲಾಷೆ, ರುಚಿಗಳನ್ನು ಬಿಟ್ಟಿಲ್ಲ.

ಶೀನ ಹಳ್ಳಿಗ. ಅವನು ಚಿಕ್ಕಂದಿನಲ್ಲಿ ಶಾಲೆ ಬಿಟ್ಟ ನಂತರ ತನ್ನ ಗಾವಿಲ ಗೆಳೆಯರೊಂದಿಗೆ ಆಡುತ್ತಿದ್ದವ. ಆಟದ ಸಮಯ ಅದೊಂದೇ ವಿಚಾರ. ಮರಕ್ಕೆ ಹತ್ತುವುದು; ಕುಟ್ಟಿದೊಣ್ಣೆ ತಯಾರು ಮಾಡುವುದು. ಮುಂದೆ ಆಟಗಾರರ ಕೂಟ. ಕುಟ್ಟಿದೊಣ್ಣೆಯನ್ನು ಆಡುವಾಗಲೂ ಕ್ರಿಕೆಟಿನ ಆಟಗಾರರಂತೆ ಜನರನ್ನು ಹಂಚುವುದುಂಟು. ಪಾರ್ಟಿ ಇಲ್ಲವೆ ಭಾಗವಾಗುವುದುಂಟು. ಆವಾಗ ಜಾತಿಯ ಪ್ರಶ್ನೆಯಿಲ್ಲ. ಮೇಲುಕೀಳು ಭಾವವಿಲ್ಲ. ಸ್ಪೃಶ್ಯಾಸ್ಪೃಶ್ಯರ ವಿಚಾರವಿಲ್ಲ. ಎಲ್ಲರೂ ಆಟಗಾರರು. ಬಾಲ್ಯವೆಂಬುದು ನಮ್ಮ ಆಟದ ಕಾಲವಾಗಿದ್ದರೂ ಬಾಲ್ಯಕಾಲದಲ್ಲಿ ಪ್ರಕೃತಿಯ ಸಂಪರ್ಕವಿದೆ. ಪ್ರಕೃತಿಯ ಭಿನ್ನ ಕಲ್ಪನೆಯು ಮುಂದೆ ಬರುವುದು. ಆಟವನ್ನು ಕಿರಿಯರೂ ಹಿರಿಯರೂ ಆಡುತ್ತಿರುವರು. ಗ್ರಾಮೀಣರಿಗೆ ಈ ಭಾಗ್ಯವು ಕಿರುಹರೆಯದಲ್ಲಿ ಮಾತ್ರ. ಜೀವನವು ದೇವರ ಒಂದು ನಿಮಿಷದ ಆಟ. ಈ ಆಟದ ಸಮಯ ಮನುಷ್ಯನು ಹಲವಾರು ಭಾವನೆಗಳನ್ನು ತಂದುಕೊಳ್ಳುತ್ತಾನೆ. ಇದನ್ನು ತಿಳಿದವನು ಮಾತ್ರ ಮನುಷ್ಯ. ತಿಳಿದರೆ ಮಾತ್ರ ಸಾಲದು; ಅದನ್ನು ಲೋಕಕ್ಕೆ ಅರುಹಹತ್ತಿದರೆ ಮಹಾಪುರುಷನಾಗಬಹುದು; ಮಹಾಪುರುಷನಾಗುವನು. ಶ್ರೀಕೃಷ್ಣ ರಾಜಕುಮಾರ ಇತರ ಗೋವಳರೊಂದಿಗೆ ಸೇರಿ ಆಟವಾಡಹತ್ತಿ, ಸಮಭಾವನೆಯಿಂದ ಇದ್ದು ಮುಂದೆ ಲೋಕಕ್ಕೆ ಮೆಚ್ಚಿದ ಪುರುಷನಾದ. ಇಂದಿನ ದೊಡ್ಡ ಮನುಷ್ಯರು ಇದನ್ನು ಬಲ್ಲರೇ! ಶೀನ ಈ ಆಟವಾಡುವುದರಲ್ಲಿ ಪ್ರೀತಿಯುಳ್ಳವ. ಆಟವಾಡಹತ್ತಿದರೆ ಮನೆಯ ಊಟ ಉಪಚಾರದ ಗೊಡವೆ ಅವನಿಗಿಲ್ಲ, ರಜಾ ದಿನಗಳಲ್ಲಿ ಇದೇ ಅವನ ನಿತ್ಯವೃತ್ತಿ.

ಶೀನನ ಆಟದ ಸಹಭಾಗಿಗಳು ಹಲವರಿರುವರು. ಶಾಲೆಯ ಒಂದೆರಡು ಸಹಪಾಠಿಗಳೂ ಅವರಲ್ಲಿರುವರು. ಹರಿಜನರಲ್ಲಿ ಸೇರಿದವ ಚನಿಯ. ಅವನು ಅವರಲ್ಲಿ ಒಳ್ಳೆಯ ಆಟಗಾರ. ಚನಿಯನು ಯಾವ ಭಾಗವನ್ನು ವಹಿಸಿದನೋ ಆ ಪಾರ್ಟಿಯು ಅಂದಿನ ಗೆಲವಿನದು. ಚನಿಯ ಶೀನರು ಆಡುತ್ತಿರುವರು. ಸಂಜೆಯಾಯಿತು. ಶೀನನ ಆಟ ಮುಗಿಯಿತು. ಮುಂದೆ ಚನಿಯನಿಗೆ ಅವನು ಆಟ ಕೊಡಬೇಕು. ಅಷ್ಟರಲ್ಲಿ ಶೀನ ಹೊರಟ. ಶೀನನೊಡನೆ 'ನನ್ನ ಆಟವಾದ ನಂತರ ಹೋಗು' ಎಂದ.

ಶೀನ:—ಹೊತ್ತಾಯಿತು.

ಚನಿಯ:—ಯಾಕೆ ಆಡಿ ಹೊರಟಿರಿ? ನನ್ನ ಆಟವಾದ ನಂತರ ನಡೆಯಿರಿ.

"ಆಗುವುದಿಲ್ಲ."

"ಬಿಡುವುದಿಲ್ಲ."

"ನಿನ್ನ ಅಪ್ಪಣೆ ಬೇಡ."

"ಆಡಲು ಅಪ್ಪಣೆ."

"ನಿನ್ನೆ ನಿನಗೆ ಮಾವಿನ ಹಣ್ಣು ಕೊಟ್ಟಿದ್ದೆ; ಅದು ಕೊಡು."

"ತಪ್ಪಿಸುವುದಕ್ಕಾಗಿ ಹಣ್ಣು ಕೊಟ್ಟಿದ್ದೇ? ಲಂಚವಲ್ಲವಷ್ಟೇ; ಆಟವಾದ ನಂತರ ಹೋಗು."

"ಅದೊಂದೂ ಆಗುವುದಿಲ್ಲ. ಆ ಮಾವಿನ ಹಣ್ಣು ಬರಲಿ ಹಣ್ಣಿಗಿಂತ ದೊಡ್ಡದೊ ಆಟ? ಇಟ್ಟು ಹೋಗು."

ಹೀಗೆ ಅವರಿಬ್ಬರಲ್ಲಿ ಮಾತು ಬೆಳೆದು ಅವರಿಬ್ಬರಿಗೆ ಜಟಾಪಟಿ ನಡೆಯಿತು. ಶೀನ ಜಾತಿಯಿಂದ ಮೇಲಿನವ; ಚನಿಯ ಕೀಳು. ಅವನಿಂದ ಎರಡು ಪೆಟ್ಟು ತಿಂದ. ಮನೆಗೆ ಬಂದ. ದೂರನ್ನು ಯಾರೊಡನೆ ಹೇಳುವುದು. ಮನೆಯವರೊಡನೆ ಹೇಳಿದರೆ ತನಗೆ ಅಪಮಾನವೆಂದೇ ತಿಳಿದ. ಇದಿಷ್ಟು ಶೀನ ಮಂಗಳೂರಿಗೆ ವಿದ್ಯಾಭ್ಯಾಸಕ್ಕೆ ಬರುವುದರ ಮೊದಲಿನ ದಿನ ನಡೆಯಿತು. ಶೀನನ ಅಪ್ಪ ಹಳ್ಳಿಯ ಶಾಲಾ ಮಾಸ್ತರ. ಅವನಿಗೆ

ವರ್ಗವಾದುದೇ ಶೀನನ ಶಾಲಾವ್ಯತ್ಯಾಸಕ್ಕೆ ಕಾರಣ. ಶೀನ ಶಾಲೆಯನ್ನು ಬಿಟ್ಟು ಬರುವಾಗ ಅದೆಲ್ಲರೂ ಅವನನ್ನು ಬಹಳವಾಗಿ ಗೌರವಿಸಿದರು. ಮುಂದೆ ಉಚ್ಚ ಶಿಕ್ಷಣವನ್ನು ಪಡೆದು ದೊಡ್ಡ ಹುದ್ದೆಯವನಾಗುವನೆಂದು ಅವನ ಸಹಪಾಠಿಗಳೆಲ್ಲರೂ ಉತ್ತಮ ರೀತಿಯಿಂದ ಪುರಸ್ಕರಿಸಿದರು.

ಶೀನನು ವಿದ್ಯಾವಂತನಾದ. ಅವನಿಗೆ ತಾನು ಬಾಲ್ಯದಲ್ಲಿದ್ದ ಊರಿಗೆ ಹೋಗಬೇಕೆಂಬ ಆಸೆಯುಂಟಾಯಿತು. ಅವನಲ್ಲಿ ಇಂದು ಸಂಪತ್ತಿಗೇನೂ ಕೊರತೆಯಿಲ್ಲ. ಕೂಡಲೇ ಬಾಡಿಗೆಯ ಕಾರ್ ಮಾಡಿದ. ತಾನು ಬಾಲ್ಯದಲ್ಲಿದ್ದ ಹಳ್ಳಿಗೆ ಹೋದ. ತಾನು ಕಲಿತ ಶಾಲೆಯನ್ನು ಸಂದರ್ಶಿಸಿದ. ಕುಟ್ಟಿದೊಣ್ಣೆಯನ್ನು ಆಡುತ್ತಿರುವ ಹುಡುಗರನ್ನು ಶಾಲೆಯ ಬಳಿಯ ಮೈದಾನದಲ್ಲಿ ನೋಡಿದ. ಆದಾಗ ಅವನಿಗೆ ಚನಿಯನ ನೆನಪು ಬಂತು; ಕೂಡಲೇ ಅಲ್ಲಿಗೆ ಕಾರನ್ನು ಕೊಂಡು ಹೋಗಿ ಚನಿಯನೆಲ್ಲಿರುವನೆಂದು ಆ ಆಡುವ ಬಾಲಕರೊಡನೆ ಕೇಳಿದ. ಆ ಹುಡುಗರು ಶೀನನ ಉಡಿಗೆಯನ್ನು ಕಂಡು ದೊರೆಯೆಂದು ಭಾವಿಸಿದರು. ನಮಸ್ಕರಿಸಿದರು. ಆ ಆಟದ ಹುಡುಗರಲ್ಲಿ ಚನಿಯನ ಮಗನಿದ್ದ. ಆ ಆಟದ ಹುಡುಗರೆಲ್ಲಾ ಒಂದುಕೂಡಿ ಚನಿಯನ ಮಗ 'ಮುದ್ದ' ಇಲ್ಲಿದ್ದಾನೆ, ಅವನೊಡನೆ ವಿಚಾರಿಸಿರಿ ಎಂದು ಹೇಳಿದರು. ಶೀನನಿಗೆ ಚನಿಯನ ಮಗನನ್ನು ಕಂಡು ಅಪಾರ ಹರ್ಷವಾಯಿತು. ಅವನ ಹತ್ತಿರ ಹೋದ. ಮುದ್ದ ದೂರ ಸರಿಯ ತೊಡಗಿದ. ಅವನು ನಿಲ್ಲಹೇಳಿದ. ಆ ಹುಡುಗ ಜಾತಿಯ ಭಯದಿಂದ ಓಡಿ ಅವನ ಗುಡಿಸಲಿಗೆ ನಡೆದ. ಶೀನನು ಅದರಿಂದ ಅವನ ಗುಡಿಸಲನ್ನು ನೋಡಿದ. ಮುಂದೆ ಅಲ್ಲಿಗೆ ಹೋದ. ಶೀನನು ದೂರದಿಂದಲೇ 'ಚನಿಯಾ!' ಎಂದು ಕೂಗಿದ. ಚನಿಯ ಹೊರಬಂದ. ಶೀನನೂ ಮುಂದೆ ಹೋದ. "ಚನಿಯಾ! ಗುರುತು ಹತ್ತಿತೇ?" ಎಂದು ಕೇಳಿದ. "ಅಯ್ಯಾ! ನೀವೆಂತಹ ಮಹಾತ್ಮರು! ನನ್ನನ್ನು ಹುಡುಕಿ ಬರಬೇಕೇ? ಕುಟ್ಟಿಯೊಡನೆ ಹೇಳಿದರೆ ಸಾಕಾಗಿತ್ತು" ಎಂದ.

ಶೀನ:—ಬಾ, ಕುಟ್ಟಿದೊಣ್ಣೆ ಆಡುವಾ.

ಚನಿಯ:—ಗಡ್ಡ ಹಣ್ಣಾಗಿದೆ. ಇನ್ನೇನು ಆಟ! ಹೊಟ್ಟೆಯದೇ ನನ್ನ ಪ್ರಶ್ನೆ.

ಶೀನ:—ನೀನು ಅದನ್ನು ಚಿಂತಿಸಬೇಡ; ನಿನ್ನನ್ನು ಉಪವಾಸವಿರಿಸೆ. ಸ್ವಲ್ಪ ಆಡೋಣ,—ಮುಂದೆ ಅವನು ನಿರ್ವಾಹವಿಲ್ಲದೆ ಆಡಲೊಪ್ಪಬೇಕಾಯಿತು; ಮೈದಾನಿಗೆ ಕಾರಲ್ಲಿ ಇಬ್ಬರೂ ತೆರಳಿದರು. ಶೀನ ಮತ್ತು ಚನಿಯುರಿಬ್ಬರೂ ಆಡುವರು; ಚನಿಯು ಇಂದು ಆಡುತ್ತಾನೆ ಅವನ ಆಟದಲ್ಲಿ ಹಿಂದಿನ ಜಾಣ್ಮೆಯು ಕಂಡುಬರುವುದಿಲ್ಲ. ಎಕ್ಕುಟ್ಟ, ಸಾಂತೀರ ಮೊದಲಾದ ಆಟಗಳು ಶೀನನದ್ದು ನಡೆದುವು, ಚನಿಯುನಿನ್ನೂ ಎಕ್ಕುಟ್ಟದಲ್ಲೇ ಇರುವ. ಶೀನನಿಗೆ ಚನಿಯನು ತನ್ನನ್ನು ಇಂದು ಮೋಸಗೊಳಿಸುತ್ತಿರುವನೆಂದೇ ತಿಳಿಯಿತು; ಅದೇನೋ ಶೀನನ ಗೆಲವು ಆಟದಲ್ಲಿ ಕಂಡುಬಂತು. ಆದರೆ ಶೀನನು ಮುಂದೂ ಆಡಲು ಉತ್ಸಾಹಯುಕ್ತನಾಗಿದ್ದಾನೆ. ಚನಿಯುನ ಹಿಂದಿನ ಉತ್ಸಾಹವನ್ನು ಕಾಣಲು ಬಯಸುತ್ತಾನೆ. ಹೊತ್ತಾದರೂ ನಿಲ್ಲಹೇಳಿದನು. ಆದಾಗ ಚನಿಯನು ಅವನ ಹಿಂದಿನ ಆಟದ ಸಹಭಾಗಿಗಳ ವಿಚಾರಗಳನ್ನೆಲ್ಲಾ ಕೇಳಹತ್ತಿದ. ಶೀನ ಅವರ ನೆಲೆಯನ್ನರುಹಿದ. ಚನಿಯು ತನ್ನ ಆಟದಲ್ಲೂ ವ್ಯತ್ಯಾಸಪಡಿಸುತ್ತಾನೆ. ಶೀನನಿಗೆ ಅವನು ದಯೆಯನ್ನು ತೋರುತ್ತಾನೆ. ಅಷ್ಟರಲ್ಲಿ ಇನ್ನೀರ್ವರು ಹಳೆಯ ಆಟದ ಜೊತೆಗಾರರು ಬಂದರು. ಅವರೊಡನೆ ಶೀನ ಕುಟ್ಟಿದೊಣ್ಣೆ ಆಡಹೇಳಿದ. ಅವರೊಂದಿಗೆ ಚನಿಯು ಆಡುವುದನ್ನು ನೋಡಹತ್ತಿದ. ಚನಿಯನು ಆಡುತ್ತಾನೆ—ಎಂತಹ ಆಟ! ಕುಟ್ಟಿ ಪೆಟ್ಟಿನಿಂದ ಆಕಾಶದ ತುದಿಗೆ ಮುಟ್ಟಿ ಮೈಲಿನಷ್ಟು ದೂರ ಸರಿಯುವುದು. ಯಾರೂ ಅದನ್ನು ಹಿಡಿಯುವವರಿಲ್ಲ. ಅವನು ಭಲೇ ಆಟಗಾರನಾಗಿದ್ದಾನೆ. ಬೇರೆಯವರು ಹೊಡೆದರೆ ಬಂದ ಕುಟ್ಟಿಯನ್ನು ಕೈಯಲ್ಲಿ ಹಿಡಿಯುವ. ಆವ ದಿಕ್ಕಿಗೇ ಹೊಡೆಯಲಿ—ಅವನ ಕೈಗೆ ಅದು ಬೀಳದಿಲ್ಲ. ಅದೇನೋ ಲೋಹ ಚುಂಬಕದಂತೆ ಅವನಲ್ಲಿ ಶಕ್ತಿ! ಎಲ್ಲಾ ಅವನ ಕೈಗೆ ಸಿಕ್ಕಿಯೇ ಸಿಕ್ಕುತಿತ್ತು. ಶೀನನಿಗೆ ಇದನ್ನು ಕಂಡು ಹಿಡಿಯಲಾರದ ಆನಂದ! ಹಿಂದಿನ ಬಾಲ್ಯದ ಅವನ ಆಟದ ಮಹತ್ವದ ನೆಲೆಯನ್ನು ಅರಿವಿಗೆ ತಂದ. ತನ್ನೊಡನೆ ಅವನಿಂದು ತೋರಿದ ಕಪಟ ವರ್ತನೆಯನ್ನು ತಿಳಿದ. ಅವನು ತನ್ನೊಡನೆ ಆಡುತಿದ್ದುದಲ್ಲ; ಆಡಿಸುತಿದ್ದುದು ಎಂದು ತಿಳಿದ. ಅವನೆದುರು ಶೀನನ ಹುದ್ದೆಯು ಗೋಡೆಯಾಗಿ ನಿಂತಿದೆ. ಅವನ ಎಣಿಕೆಯು

ಶೀನನಿಗೆ ಹೊಳೆಯಿತು. ಗೌರವವನ್ನು ಅವನಿಂದ ಪಡೆದ; ಅವನ ಸಾಹಚರ್ಯವನ್ನು ಪಡೆಯಲಾಗಲಿಲ್ಲ. ಬಾಲ್ಯವು ಇಬ್ಬರಲ್ಲೂ ಇಲ್ಲ. ಬಾಲ್ಯದಲ್ಲಿ ಆ ಭೇದವು ಅವರಲ್ಲಿದ್ದಿಲ್ಲ. ಇಂದು ಈ ನೆಲೆಯನ್ನು ಹೊಂದಿ ಶೀನನು ಚನಿಯನ ದಯೆಗೆ ಯೋಗ್ಯನಾಗಿದ್ದಾನೆ. ಅವನು ಅವನ ಜೊತೆಯವನೆಂದು ಇಂದು ತಿಳಿಯುವುದಿಲ್ಲ. ಅವನು ಇಂದು ದೊಡ್ಡವನಾಗಿದ್ದಾನೆ. ಶೀನ ಕಿರಿಯವನಾಗಿದ್ದಾನೆ. ಕೊನೆಗೆ ಓಟಗೊಂಡು ಹೊಡೆಯುವ ಭರದಲ್ಲಿ ಚನಿಯ ಕಾಲುತಪ್ಪಿ ಬಿದ್ದ. ಶೀನ ಓಡಿ ಬಂದು ಚನಿಯನನ್ನು ಎತ್ತಿ ಹಿಡಿದ. ಉಪಚರಿಸ ತೊಡಗಿದ. ಎಲ್ಲರೂ ಶೀನನ ಹೃದಯವನ್ನರಿತರು. 'ಇಂತಹ ಹೃದಯ ಎಲ್ಲಿ' ಎಂದರು.

ನವಭಾರತ 8-11-1943

---

